608

ಶ್ರೀ ಎನ್. ಜಿ. ಲಕ್ಷ್ಮೀನರಸಿಂಹ ಅಯ್ಯಂಗಾರ್ ಸ್ಮಾರಕ ಪುಸ್ತಕಮಾಲೆ–೧.

ಶ್ರೀ ಕುಲಶೇಖರ ಆಳ್ವಾರ್ ಕರುಣಿಸಿದ

# ಮುಕುಂದಮಾಲಾ

ಸಂಪಾದಕ:

ಜಿ. ಪಿ. ರಾಜರತ್ನಂ

ಮೈಸೂರು ಸಂಸ್ಥಾನದ
ಹೆಬ್ಬಾರ್ ಶ್ರೀವೈಷ್ಣವ ಸಭೆಯ
ಸ್ವರ್ಣಮಹೋತ್ಸವದ ಸವಿನೆನಪಿಗಾಗಿ
ಪುನರ್ಮುದ್ರಿತವಾಗಿದೆ
೮–೯, ಜೂನ್ ೧೯೬೮.



'ವಿದೇಹ'
14, 17 ನೇ ಕ್ರಾಸ್ ರೋಡ್, ಮಲ್ಲೇಶ್ವರಂ, ಬೆಂಗಳೂರು-3.

ಐವತ್ತು ಪೈಸೆ

G. Srinivasan 9/9/68

ಶ್ರೀ ಎನ್. ಜಿ. ಲಕ್ಷ್ಮೀನರಸಿಂಹ ಅಯ್ಯಂಗಾರ್ ಸ್ಮಾರಕ ಪುಸ್ತಕಮಾಲೆ-೧

ಶ್ರೀ ಕುಲಶೇಖರ ಆಳ್ವಾರ್ ಕರುಣಿಸಿದ

# ಮುಕುಂದಮಾಲಾ

ಎಂಬ

## ಸ್ತೋತ್ರಮುಕ್ತಾಮಂಜರಿ

ಸಂಪಾದಕ :

ಜಿ. ಪಿ. ರಾಜರತ್ನಂ



'ವಿದೇಹ'
14, 17ನೇ ಕ್ರಾಸ್ ರೋಡ್
ಮಲ್ಲೇಶ್ವರಂ, ಬೆಂಗಳೂರು-3.

ಮೊದಲನೆಯ ಮುದ್ರಣ : ೭-೧೨-೫೫
ಎರಡನೆಯ ಮುದ್ರಣ : ೧-೯-೬೭

ಓಂ ನಮೋ ನಾರಾಯಣಾಯ
ಓಂ ನಮೋ ಭಗವತೇ ವಾಸುದೇವಾಯ

---

ಯಾರ ಪಾಲಿಗೂ ತಾವು ಮುಳ್ಳಾಗದೆ
ಹತ್ತಿರ ಬಂದವರಿಗೆಲ್ಲ ಹೂವಾಗಿ ಹಣ್ಣಾಗಿ
ಬದುಕಿ ಬಾಳಿ ಹೋದ

ತೀರ್ಥಸ್ವರೂಪ
ಶ್ರೀ ಎಸ್. ಜಿ. ಲಕ್ಷ್ಮೀನರಸಿಂಹ ಅಯ್ಯಂಗಾರ್
ಅವರ ನೆನಪಿನ ನಂದಾದೀವಿಗೆಗೆ
ಮೊದಲನೆಯ ನಾಲಗೆಯಾಗಿ
ಈ ' ಮುಕುಂದಮಾಲಾ ' ಪ್ರಕಟವಾಯಿತು

---

ಶ್ರೀ ಕೃಷ್ಣಾರ್ಪಣಮಸ್ತು

ಮುದ್ರಕರು :
ರಾಜಾ ಪವರ್ ಪ್ರೆಸ್
೧೪ನೇ ಕ್ರಾಸ್ ರೋಡ್, ಮಲ್ಲೇಶ್ವರಂ, ಬೆಂಗಳೂರು-೩.

# ಮೊದಲ ಮಾತು

ಬೆಂಗಳೂರಿನ ಮಲ್ಲೇಶ್ವರದ ಗಣ್ಯವೃದ್ಧರುಗಳಲ್ಲಿ ಒಬ್ಬರಾದ **ತೀರ್ಥಸ್ವರೂಪ ಶ್ರೀ ಎನ್. ಜಿ. ಲಕ್ಷ್ಮೀನರಸಿಂಹ ಅಯ್ಯಂಗಾರ್ಯರು** ಕಳೆದ ಏಕಾದಶಿ ಶುಕ್ರವಾರ (25—11—55) ರಾತ್ರಿ, ತಮ್ಮ ಎಂಬತ್ತನೆಯ ವಯಸ್ಸಿನಲ್ಲಿ ಶ್ರೀಮನ್ನಾರಾಯಣನ ತಿರುವಡಿಗಳನ್ನು ಸೇರಿ ಕೃತಾರ್ಥರಾದರು.

ಭಗವದ್ಭಕ್ತರಾದ ಇವರಿಗೆ ಪ್ರತಿದಿನದ ಬೆಳಗು **'ಮುಕುಂದಮಾಲಾ'** ಸ್ತೋತ್ರದ ಮಂಜುಳವರ್ಣಗಳಿಂದ ಆರಂಭವಾಗುತ್ತಿತ್ತು. ಈ ಸ್ತೋತ್ರ ಮುಕ್ತಾಮಂಜರಿಯ ಪ್ರತಿಯೊಂದು ಅಕ್ಷರದ ಮಾಧುರ್ಯವನ್ನೂ ನಾಲಗೆ ತಾನು ಸವಿಯುವಷ್ಟೂ ಸವಿದು, ತನ್ಮೂಲಕವಾಗಿ ಆಯಂದಿನ ನಿತ್ಯಕರ್ಮಗಳಿಗೆ ಅವರ ಚೈತನ್ಯವು ಜಾಗೃತವಾಗುತ್ತಿತ್ತು.

ಸಂಸಾರವೊಂದಿಗರಾಗಿ, ತಮ್ಮ ಆಶ್ರಿತವರ್ಗದ ಯೋಗಕ್ಷೇಮವನ್ನು ನಿರ್ವಹಿಸುವುದಕ್ಕೋಸ್ಕರ ನಡಸುತ್ತಿದ್ದ ಲೌಕಿಕ ವ್ಯವಹಾರ ಕಾರ್ಯಗಳ ಜೊತೆಗೆ ತಮ್ಮ ಆತ್ಮದ ಕ್ಷೇಮಲಾಭವನ್ನು ಸಂಪಾದಿಸಿಕೊಡುವ ಭಗವದ್ಧ್ಯಾನ ವಿಷಯಕವಾದ ಪಾರಲೌಕಿಕ ಕರ್ಮಗಳಿಗಾಗಿಯೂ ಅವರ ಕಾಲದ ಬಹುಭಾಗ ಸದ್ವಿನಿಯೋಗವಾಗುತ್ತಿತ್ತು. "ಸಂಸಾರಭರಣದೊಳೆ ಸಂನ್ಯಸನ ನಯು" ವನ್ನು ಅನುಷ್ಠಾನಮಾಡಬೇಕೆಂಬ ಆದರ್ಶಕ್ಕೆ ಅವರು ಉತ್ತಮ ಉದಾಹರಣೆಯಾಗಿ ಇದ್ದರು.

ಕಣ್ಣುಗಳೆರಡನ್ನೂ ಕಳೆದುಕೊಂಡು ಹತ್ತು ವರ್ಷಗಳ ಕಾಲ ಸಾರ್ಥಕವಾಗಿ ಬದುಕು ನಡಸಿದ ಅವರ ಬಾಯಲ್ಲಿ ಒಮ್ಮೆಯಾದರೂ ತಮ್ಮ ನಷ್ಟದ ಬಗ್ಗೆ ತಮಗೇ ಮರುಕವಾಗಲಿ, ಅದೃಷ್ಟದ ಮೇಲೆ ಆಕ್ಷೇಪವಾಗಲಿ ಒಂದು ಸುದ್ದಿ ಸೊಲ್ಲು ಬಂದದ್ದಿಲ್ಲ. 'ಯದ್ಯದ್ ಭವ್ಯಂ ಭವತು ಭಗವನ್ ಪೂರ್ವಕರ್ಮಾನುರೂಪಂ' ಎಂದು ಈಶ್ವರೇಚ್ಛೆಗೆ ವಿಧೇಯವಾಗಿ ನಡೆದುಕೊಂಡರು.

"ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ"

ಎಂಬ ಅಭಯದ ಡಂಗುರವನ್ನು ಸಾರಿದ ಶ್ರೀಕೃಷ್ಣನ ಗೀತಾ ಗ್ರಂಥರಾಜ

ವನ್ನು ಕರಾವಲಂಬನವನ್ನಾಗಿ ಕೈಕೊಂಡು, ಭಗವಂತನಲ್ಲಿ ನ್ಯಸ್ತಭರರಾಗಿ, ಪ್ರಪತ್ತಿಮಾರ್ಗದಲ್ಲಿ ನಿಶ್ಚಿಂತೆಯಿಂದ ನಡೆದು ಬದುಕಿದರು. ಮಕ್ಕಳ, ಮೊಮ್ಮಕ್ಕಳ, ಇತರರ ಕಣ್ಣು ಬಾಯಿಗಳನ್ನೇ ತಮಗೆ ನೂರು ಕಣ್ಣು ಮಾಡಿ ಕೊಂಡು, ಗೀತೆಯ ಬೇರೆ ಬೇರೆ ಭಾಗಗಳನ್ನು, ಹಗಲಿನ ಬೇರೆ ಬೇರೆ ಹೊತ್ತು ಗಳಲ್ಲಿ ಎಷ್ಟೆಷ್ಟು ಓದಿಸಿ, ಕಿವಿಗೊಟ್ಟು ಕೇಳಿ, ಜೊತೆಗೆ ತಾವೂ ಮನಃಪೂರ್ತಿ ಯಾಗಿ ಹೇಳಿದರೂ ಅವರಿಗೆ ಸಾಲದು. ಗೀತೆಯ ಬಗ್ಗೆ ಅವರಿಗೆ 'ಹುಚ್ಚು' ಹಿಡಿದುಹೋಗಿತ್ತು ಎಂದರೂ ತಪ್ಪಾಗಲಾರದು. ಅವರಿಗೆ ಇಂತಹ ಹುಚ್ಚು ಹಿಡಿದದ್ದರಿಂದಲೇ ಅವರು ತಮ್ಮವರ ಪಾಲಿಗೆ ಇಷ್ಟು ವರ್ಷಗಳು ಅಶ್ವತ್ಥದ ಹಾಗೆ ಭದ್ರವಾಗಿ ಇದ್ದು ಎಲ್ಲರನ್ನೂ ಮುಂದೆ ತಂದರು.

ದೇಹವಿಸರ್ಜನೆ ಆಗುವುದಕ್ಕೆ ಮೂರು ದಿವಸಗಳ ಮುಂಚೆ, ಬಾಹ್ಯ ಪ್ರಪಂಚ ಜ್ಞಾನವು ವಿಮುಖವಾಗುವುದಕ್ಕೆ ಮೊದಲು, ಒಂದು ದಿನವೆಲ್ಲಾ ಭಗವದ್ಗೀತೆಯ ಎರಡನೆಯ ಅಧ್ಯಾಯದ ಸ್ಥಿತಪ್ರಜ್ಞನ ಲಕ್ಷಣಗಳನ್ನೊಳ ಕೊಂಡ ಶ್ಲೋಕಗಳ ಪಾದಗಳನ್ನು ಅಲ್ಲೊಂದು ಇಲ್ಲೊಂದು ಮತ್ತೆ ಮತ್ತೆ ಕನವರಿಸಿಕೊಳ್ಳುತ್ತಿದ್ದರು. 'ನಾಭಿನಂದತಿ ನ ದ್ವೇಷ್ಟಿ . . . ನಾಭಿನಂದತಿ ನ ದ್ವೇಷ್ಟಿ' ಎಂದು ಮತ್ತೆ ಮತ್ತೆ ಹೇಳುವರು ; ಹೇಳಿಯಾದ ಮೇಲೆ 'ಸರಿ' ಎಂದು ಅದನ್ನು ಮುಗಿಸಿ ಬಿಟ್ಟ ಹಾಗೆ ಮತ್ತೆ ಯಾವುದಾದರೂ ಒಂದು ಪಾದ ವನ್ನು ಸ್ಮರಿಸಿಕೊಳ್ಳುವರು, ಹೇಳಿದ್ದನ್ನೆ ಮತ್ತೆ ಹೇಳುವರು. ಹೀಗೆ ಒಂದು ದಿನವೆಲ್ಲಾ ಗೀತೆಯ ಅಷ್ಟಾಕ್ಷರಗಳು ಹೊರತಾಗಿ ಬೇರೊಂದು ಮಾತಿಲ್ಲ. ಈ ಮೋಹನಮಾಲೆಯಲ್ಲಿ ಕಟ್ಟಕಡೆಯದಾಗಿ ಅವರ ಮುಖದಿಂದ ಬಂದುದೆಂದರೆ : "ವೀತರಾಗಭಯಕ್ರೋಧಃ." "ಆಹಾರ ತೆಗೆದುಕೊಳ್ಳಬೇಕು, ಬಾಯಿ ತೆರೆ ಯಿರಿ"–ಎಂದು ಕೇಳಿಕೊಂಡಾಗ, "ಆಂ ? ವೀತರಾಗಭಯಕ್ರೋಧಃ . . . ಪಣ್ಣೇನಾ ? ಸರಿ !" (ಎಂದರೆ, ರಾಗ ಭಯ ಕ್ರೋಧಗಳನ್ನು ಬಿಟ್ಟವನು . . . ನಾನು ಮಾಡಿದೆನಾ ? ಸರಿ!) ಎಂದರು. ಅದೇ ಕೊನೆಯ ಮಾತಾಯಿತು, ಆಮೇಲೆ ಮಾತು ನಿಂತುಹೋಯಿತು. ಮೈಯ ಮೇಲಿನ ಎಚ್ಚರ ಮುಗಿಯಿತು, ಉಸಿರು ಮಾತ್ರ ಆಡುತ್ತಿತ್ತು.

ಮೂರು ದಿನಗಳನಂತರ, ಏಕಾದಶಿಯ ರಾತ್ರಿ, ಅವರ ಜೀವ ಶ್ರೀಮನ್ ನಾರಾಯಣನ ತಿರುವಡಿಗಳಲ್ಲಿ ಹೋಗಿ ಸೇರಿಕೊಂಡಿತು.

§

ಹತ್ತು ವರ್ಷಗಳ ಕಾಲ ಈ ಹಿರಿಯ ಬೆಳಕಿನ ಹೊಸ್ತಿಲಿನ ಪಕ್ಕದಲ್ಲಿ ಹಗಲೂ ರಾತ್ರಿ ಇದ್ದು, ನಾನು ಬಹುಮಟ್ಟಿಗೆ ನನ್ನ ಅಂತರಂಗದ ಕತ್ತಲೆಯನ್ನು ಕಳೆದುಕೊಂಡಿರುವುದಾಗಿದೆ. ಗಡಿಗೆಯೊಳಗಿನ ಬೆಳಕು, ಗಡಿಗೆಯೊಡೆದು ಹೋದರೆ, ನಿರ್ಬಾಧಿತವಾಗಿ ಬೆಳಗುವಂತೆ ಈಗ ಇರುವ ಅವರ ಬೆಳಕನ್ನು ಅವಿರತವಾಗಿ, ಇನ್ನೂ ಸ್ಪಷ್ಟವಾಗಿ ಕಾಣುವಂತಹ ಕಣ್ಣು ನನಗೆ ಬೆಳೆಯಲಿ ಎಂದು, ಅವರು ನಂಬಿದ್ದ ಕೃಷ್ಣನನ್ನೆ ನಾನೂ ಬೇಡಿಕೊಳ್ಳುತ್ತೇನೆ. ಈ ಬೇಡಿಕೆಯ ಸಾಕಾರರೂಪವೇ ಈ ಸ್ಮಾರಕಪುಸ್ತಕಮಾಲೆ.

ಅಕ್ಷರದ ಶಕ್ತಿಯಲ್ಲಿ ನನಗೆ ಅಪಾರವಾದ ಶ್ರದ್ಧಾವಿಶ್ವಾಸಗಳುಂಟು. ಮನಸ್ಸನ್ನು ಶುದ್ಧಗೊಳಿಸಿಕೊಂಡರೆ, ಅದರ ಕೆಳಗಿನದೂ ಅದರ ಮೇಲಿನದೂ ತನ್ನಷ್ಟಕ್ಕೆ ತಾನೇ ಶುದ್ಧವಾಗುತ್ತದೆ—ಎಂದ ಬುದ್ಧಗುರುವಿನ ಮಾತಿನಲ್ಲಿ ನನಗೆ ತುಂಬು ನಂಬಿಕೆ. ಅದರಿಂದ, ಶ್ರೀ ಲಕ್ಷ್ಮೀನರಸಿಂಹ ಅಯ್ಯಂಗಾರ್ಯರು ಯಾವ ಸದ್ಭಾವನೆಯ ಬಲದಿಂದ ತಾವು ಆತ್ಮಬಲಿಯಾಗಿ ಬದುಕಿದರೋ, ಅದೇ ಭಾವನೆಗೆ ನಾನೂ ನನ್ನ ಮಟ್ಟಿಗೆ ಶರಣನಾಗಿರುವ ಕಾರಣದಿಂದ— ಯಾವ 'ಮುಕುಂದಮಾಲಾ' ಸ್ತೋತ್ರವು ಅವರಿಗೆ ಎಡೆಬಿಡದೆ ಪ್ರಾತಃ ಸ್ಮರಣೀಯವಾಗಿದ್ದಿತೋ ಅದೇ 'ಮುಕುಂದಮಾಲಾ' ಸ್ತೋತ್ರವು, ಕನ್ನಡ ಅನುವಾದಸಹಿತವಾಗಿ, ಅವರ ಹೆಸರಿನ ಸ್ಮಾರಕ ಪುಸ್ತಕಮಾಲೆಯ ಮೊದಲನೆಯ ಪುಸ್ತಕವಾಗಿ ಪ್ರಕಟವಾಗಿದೆ. ಈಶ್ವರಕೃಪೆ ಒದಗಿದರೆ, ಇದೇ ರೀತಿಯ ಸುಲಭ ಪುಸ್ತಕಗಳು ಕಾಲಕಾಲಕ್ಕೆ ಈ ಮಾಲೆಗೆ ಸೇರುತ್ತಾ ಹೋಗುವುವು.

§

ಸಮಸ್ತ ಭಾರತಕ್ಕೆ ತ್ರಾಣದಾಯಿಯಾದ ಸಂಸ್ಕೃತವಾಙ್ಮಯದಲ್ಲಿ ಸ್ತೋತ್ರಸಾಹಿತ್ಯದ ವಿಭಾಗವೊಂದೇ ಸಾಕು,—ಬೆಳ್ಳಿಯ ಬೆಟ್ಟದಂತೆ ವಿರಾಜಿಸುತ್ತಿದೆ. ಅನಾದಿಯೆನಿಸಿದ ವೇದಗಳಿಂದ ಹಿಡಿದು ಕಾವ್ಯಗಳೇ ಕೊನೆಯಾದ ಪ್ರತಿಯೊಂದು ಸಾಹಿತ್ಯಸಂಘಾತದಲ್ಲಿಯೂ ಸ್ತೋತ್ರಗಳು ಹೂವಿನೊಳಗಿನ ಮಕರಂದದಂತೆ ಮಿರುಮಿರುಗಿ ಸುಗಂಧವನ್ನು ಬೀರುತ್ತ ಭಕ್ತಭ್ರಮರಗಳನ್ನು ತಮ್ಮೆಡೆಗೆ ಕರೆಯುತ್ತಿವೆ. ಪರಮವನ್ನು ಕಾಣಲು ಇರುವ ಮಾರ್ಗಗಳಲ್ಲೆಲ್ಲ

ಅತ್ಯಂತ ಸುಲಭವೆನ್ನಿಸಿದ ಭಕ್ತಿಮಾರ್ಗದಲ್ಲಿ ಈ ಸ್ತೋತ್ರಗಳು ಸಾಲುಮರ ಗಳಂತೆ ನಿಂತು ನೆರಳು ಕೊಡುತ್ತಿವೆ.

ಸ್ತೋತ್ರಗಳ ಮೂಲಕವಾಗಿ ನಾವು ಭಗವಂತನನ್ನು ಪ್ರಾರ್ಥಿಸಿಕೊಳ್ಳ ಬೇಕಾದ ಅಗತ್ಯವನ್ನು ಕುರಿತು ಮಹಾತ್ಮ ಗಾಂಧೀಜಿ ಹೀಗೆ ಹೇಳಿದ್ದಾರೆ :

"ಮನುಷ್ಯನು ತಾನು ಹೀನಸ್ಥಿತಿಗೆ ಬಂದಾಗ, ತನ್ನನ್ನು ಉದ್ಧರಿಸ ಬೇಕೆಂದು ದೇವರನ್ನು ಪ್ರಾರ್ಥಿಸುತ್ತಾನೆ. 'ದಿಕ್ಕುಕೆಟ್ಟವರಿಗೆ ದೇವರೆ ಜೊತೆ' ಎಂದು ತಮಿಳು ಗಾದೆ ಹೇಳುತ್ತದೆ.

"ದೇವರನ್ನು ಕುರಿತು ನಾವು ಕೇಳಿಕೊಳ್ಳಬೇಕಾದ ಆವಶ್ಯಕತೆಯಾದರೂ ಏನು ? ದೇವರಿಗೆ—ಅಂಥವನೊಬ್ಬನು ಇರುವುದಾದರೆ—ನಮಗೆ ಏನಾಗಿದೆ ಎಂಬುದು ತಾನಾಗಿಯೆ ತಿಳಿಯುವುದಿಲ್ಲವೇನು ? ತನ್ನ ಕರ್ತವ್ಯವನ್ನು ತಾನು ನಡಸುವುದಕ್ಕೆ ಸಹಾಯವಾಗಿ ಆತನಿಗೂ ಪ್ರಾರ್ಥನೆಯ ಅಗತ್ಯ ಉಂಟೇನು ?

"ದೇವರಿಗೆ ನಾವೇನೂ ನೆನಪು ಕೊಡಬೇಕಾದ ಅಗತ್ಯವಿಲ್ಲ. ಆತ ಎಲ್ಲರ ಒಳಗೂ ಇದ್ದಾನೆ. ಆತನ ಅನುಜ್ಞೆಯಿಲ್ಲದೆ ಏನೊಂದೂ ಆಗದು. ನಮ್ಮ ಪ್ರಾರ್ಥನೆ ಎಂಬುದು ನಮ್ಮ ಹೃದಯಶೋಧನೆ, ಆತನ ಅವಲಂಬನವಿಲ್ಲದೆ ನಾವು ನಿಸ್ಸಹಾಯರು ಎಂದು ನಮಗೆ ನಾವೇ ಕೊಟ್ಟುಕೊಳ್ಳುವ ನೆನಪು. ಪ್ರಾರ್ಥನೆಯಿಲ್ಲದೆ, ದೇವರ ಆಶೀರ್ವಾದ ಬೆನ್ನ ಹಿಂದೆ ಇದ್ದ ಹೊರತು, ಅತ್ಯುತ್ತಮವಾದ ಮನುಷ್ಯಪ್ರಯತ್ನ ಕೂಡ ವ್ಯರ್ಥ—ಎಂದು ಸ್ಪಷ್ಟವಾಗಿ ಗುರುತಿಸಿಕೊಳ್ಳದೆ ಮಾಡಿದ ಯಾವ ಪ್ರಯತ್ನವೂ ಪೂರ್ಣವಾಗದು. ಪ್ರಾರ್ಥನೆ ಎಂದರೆ—ನಾವು ವಿನೀತರಾಗಬೇಕೆಂಬ ಒಂದು ಆಂತರ್ಯದ ಕರೆ. ಪ್ರಾರ್ಥನೆ ಎಂಬುದು—ನಮ್ಮ ಆತ್ಮಶುದ್ಧಿಗೆ, ನಮ್ಮ ಅಂತರಂಗದ ಶೋಧನೆಗೆ ಒದಗುವ ಒಂದು ಕರೆ."

§

ಸಂಸ್ಕೃತದಲ್ಲಿ ಹೇಗೋ ಹಾಗೆಯೇ ಭಾರತದ ದೇಶಭಾಷೆಗಳಲ್ಲಿಯೂ ಅದೇ ಅಂತರಂಗವುಳ್ಳ ಸ್ವತಂತ್ರ ಸ್ತೋತ್ರಸಾಹಿತ್ಯ ಅಪಾರವಾಗಿ ಬೆಳೆದು ಬಂದಿದೆ. ಇವುಗಳಲ್ಲಿ ಅತ್ಯಂತ ಪ್ರಾಚೀನವಾದವು ತಮಿಳುಭಾಷೆಯಲ್ಲಿವೆ. ಅವು ಯಾವುವೆಂದರೆ : ವಿಷ್ಣುವಿನ ಭಕ್ತರು ಉಸಿರಿದ '**ಪ್ರಬಂಧ**'ಗಳು, ಮತ್ತು ಶಿವನ ಭಕ್ತರು ಉಸಿರಿದ '**ತೇವಾರ**'ಗಳು, '**ತಿರುವಾಚಕ**'ಗಳು.

'ಪ್ರಬಂಧ'ಗಳನ್ನು ಉಸಿರಿದ ವೈಷ್ಣವಭಕ್ತರನ್ನು 'ಆಳ್ವಾರ್' ಎಂದು ಕರೆಯುತ್ತಾರೆ. 'ಆಳ್ವಾರ್' ಎಂದರೆ ಭಗವದ್ಭಕ್ತಿಯಲ್ಲಿ ಆಳಿದವರು, ಮುಳುಗಿದವರು ಎಂದು ಅರ್ಥ. ಇಂತಹ 'ಆಳ್ವಾರ್'ಗಳು ಹನ್ನೆರಡು ಜನ: ಪೊಯ್‌ಗೈಯಾಳ್ವಾರ್, ಪೂತತ್ತಾಳ್ವಾರ್, ಪೇಯಾಳ್ವಾರ್, ತಿರುಮಳಿಶೈಯಾಳ್ವಾರ್, ಕುಲಶೇಖರಾಳ್ವಾರ್, ಪೆರಿಯಾಳ್ವಾರ್, ಆಂಡಾಳ್, ತೊಂಡರಡಿಪ್ಪೊಡಿಯಾಳ್ವಾರ್, ತಿರುಪ್ಪಾಣಾಳ್ವಾರ್, ತಿರುಮಂಗೈಯಾಳ್ವಾರ್, ನಮ್ಮಾಳ್ವಾರ್, ಮತ್ತು ಮಧುರಕವಿಯಾಳ್ವಾರ್.

ಈ ಹನ್ನೆರಡು ಆಳ್ವಾರ್‌ಗಳಲ್ಲಿ ಆಂಡಾಳ್ (ಆಳ್ವಾರ್ ಎಂಬುದರ ಸ್ತ್ರೀ ರೂಪ) ಎಂಬ ಗೋದಾದೇವಿ ಒಬ್ಬರು ಹೊರತಾಗಿ ಉಳಿದವರು ಗಂಡಸರು. ಈಕೆ ವಿಪ್ರವಂಶಜರಾದ ಪೆರಿಯಾಳ್ವಾರರ ಸಾಕುಮಗಳು; ದಶರಥನಿಗೆ ಸೀತಾದೇವಿ ಹೇಗೋ ಹಾಗೆ, ಅಯೋನಿಜೆ. ಇವರಂತೆಯೇ ಮೊದಲಿನ ಮೂವರು ಆಳ್ವಾರರು ಅಯೋನಿಜರು, ಪುಷ್ಪಗಳಲ್ಲಿ ಜನಿಸಿದವರು; ತಿರುಮಳಿಶೈಯವರ ಜಾತಿ ತಿಳಿಯದು; ಕುಲಶೇಖರರು ಕ್ಷತ್ರಿಯರು; ತಿರುಪ್ಪಾಣಿಗಳು ಅಂತ್ಯಜರು; ನಮ್ಮಾಳ್ವಾರರು ವೆಳ್ಳಾಳರು; ತಿರುಮಂಗೈ 'ಕಳ್ಳರ್' ಎಂಬ ಕುಲದವರು; ಇನ್ನುಳಿದವರು ಬ್ರಾಹ್ಮಣಜಾತಿಯ ಆಳ್ವಾರರು. ಈ ರೀತಿಯಾಗಿ ಈ ಆಳ್ವಾರುಗಳೆಲ್ಲರೂ ಆ ಜಾತಿ ಈ ಜಾತಿ ಎನ್ನದೆ, ಗಂಡಸು ಹೆಂಗಸು ಎನ್ನದೆ, ಪಂಡಿತ ಪಾಮರ ಎನ್ನದೆ—ಭಕ್ತಿಯು ಮುಕ್ತಿಗೆ ಸುಲಭವಾದ ದಾರಿ, ಈ ದಾರಿಯನ್ನು ಹಿಡಿಯಲು ಎಲ್ಲರಿಗೂ ಅಧಿಕಾರವುಂಟು ಎಂಬ ಭಾಗವತತತ್ತ್ವವನ್ನು ತಮ್ಮ ಬದುಕಿನ ನಡವಳಿಕೆಯ ಮೂಲಕ ಲೋಕಕ್ಕೆ ತೋರಿಸಿಕೊಟ್ಟರು.

ಈ ಆಳ್ವಾರ್‌ಗಳು ಯಾವಾಗ ಇದ್ದರು ಎಂಬ ಬಗ್ಗೆ ಎರಡು ಮತಗಳಿವೆ. ಸಂಪ್ರದಾಯದವರು ಕ್ರಿ. ಪೂ. ಮೂರು ನಾಲ್ಕು ಸಾವಿರ ವರ್ಷಗಳ ಹಿಂದೆ ಇವರು ಇದ್ದರೆಂದು ನಂಬುತ್ತಾರೆ. ಐತಿಹಾಸಿಕ ಸಂಶೋಧಕರು ಕ್ರಿ. ಶ. ಏಳನೆಯ ಶತಮಾನಕ್ಕೂ ಒಂಬತ್ತನೆಯ ಶತಮಾನಕ್ಕೂ ನಡುವೆ ಇವರುಗಳು ಇದ್ದರೆಂದು ಅಭಿಪ್ರಾಯಪಡುತ್ತಾರೆ. ಸಂಜೀವನೌಷಧವು ಪ್ರಾಚೀನವಾದರೇನು? ಅರ್ವಾಚೀನವಾದರೇನು? ಅದರ ಸಂಜೀವನ ಗುಣವೇ ನಮಗೆ ಮೊದಲು ಸಂಬಂಧಪಟ್ಟದ್ದು! ಆಳ್ವಾರುಗಳ ಪ್ರಬಂಧಗಳಲ್ಲಿ ಈ ಗುಣವನ್ನು ಯಥೇಷ್ಟವಾಗಿ ಕಂಡು ಉಂಡಿದ್ದಾರೆ ಅನುಭಾವಿಗಳು.

§

ಆಳ್ವಾರ್‌ಗಳು ಭಗವಂತನ ಸಾಕ್ಷಾತ್ಕಾರಕ್ಕೆ ತಾವು ಹಿಡಿದ ದಾರಿ—ಭಕ್ತಿಯ ದಾರಿ. ಬುದ್ಧಿಗೆ ಸಂಬಂಧಪಟ್ಟ ಜ್ಞಾನಕ್ಕಿಂತ ಹೃದಯಕ್ಕೆ ಸಂಬಂಧಪಟ್ಟ ಭಕ್ತಿಗೆ ಅವರು ಮೊದಲ ಸ್ಥಾನವನ್ನು ಕೊಟ್ಟರು. ಅದಕ್ಕಿಂತ ಇದು ಸುಲಭ ಎಂಬುದನ್ನು ತಮ್ಮ ಬದುಕಿನಿಂದ ತೋರಿಸಿದರು.

ಅವರ ಉಪದೇಶವನ್ನು ಹೀಗೆ ಸಂಗ್ರಹಿಸಬಹುದು :

ಮನುಷ್ಯನಿಗೆ ಮೊತ್ತಮೊದಲನೆಯ ಕರ್ತವ್ಯವೆಂದರೆ—ತನ್ನ ಆತ್ಮವನ್ನು ಭಗವಂತನಿಗೆ ಅರ್ಪಣೆಮಾಡಿಕೊಳ್ಳುವುದು; ಭಗವಂತನೊಬ್ಬನನ್ನೇ ಉಪಾಸನೆ ಮಾಡಿ ಆತನ ಪರಿಚರ್ಯೆ ಮಾಡುವುದು; ಭಗವಂತನಲ್ಲದೆ ಬೇರೆ ಯಾವುದರಲ್ಲಿಯೂ ಭಕ್ತಿ ಇಡದಿರುವುದು; ಭಗವಂತನನ್ನು ನಾರಾಯಣನೆಂಬ ನಾಮರೂಪಗಳಿಂದ ಉಪಾಸಿಸುವುದು.

ನಾರಾಯಣನಿಂದ ಬಂದುದು ಈ ಜಗತ್ತು, ನಾರಾಯಣನಲ್ಲಿ ನಿಂತಿರುವುದು ಈ ಜಗತ್ತು, ಕಡೆಗೆ ನಾರಾಯಣನೊಳಗೆ ಹೋಗುವುದು ಈ ಜಗತ್ತು. ನಾರಾಯಣನು ಜಗತ್ತಿನ ಒಳಗೂ ಹೊರಗೂ ವ್ಯಾಪಿಸಿಕೊಂಡು, ಇದನ್ನು ತನ್ನ ಇಚ್ಛೆಯಂತೆ ನಡಸುತ್ತಿರುವನು. ಈ ಜಗತ್ತು ಎಂಬುದು ನಾರಾಯಣನಿಗೆ ಶರೀರ, ಈ ಶರೀರದೊಳಗಿನ ಆತ್ಮ ನಾರಾಯಣನೇ. ಜಗತ್ತಿನಲ್ಲಿ ನಾವು ಕಾಣುವ ಚೇತನ ಅಚೇತನಗಳು ಎಲ್ಲವೂ ನಾರಾಯಣನ ಸಾಕಾರವಾದ ಪ್ರಕಾರಗಳು, ಇವು ಎಲ್ಲವೂ ಆತನಿಗೆ ಅಧೀನವಾದವುಗಳು.

ನಾರಾಯಣನು ಸತ್—ಚಿತ್—ಆನಂದ—ಸ್ವರೂಪನು, ಅಕ್ಷರನು, ಅವ್ಯಯನು, ಅಮೃತನು, ಸರ್ವವ್ಯಾಪಿಯು, ಸರ್ವಾಂತರ್ಯಾಮಿಯು, ಸಕಲವಾದ ಸತ್ಯ ಸೌಂದರ್ಯಗಳಿಗೂ ನೆಲೆವೀಡು. ನಾರಾಯಣನ ಕರುಣೆ ಸಮುದ್ರದಂತೆ ಅಪಾರವಾದುದು, ಕಲ್ಯಾಣಗುಣಪರಿಪೂರ್ಣವಾದದ್ದು. ನಾರಾಯಣನ ವಕ್ಷಃಸ್ಥಲದಲ್ಲಿ ಎಂದಿಗೂ ಅಗಲದೆ ನೆಲಸಿರುವ ಜಗನ್ಮಾತೆಯಾದ ಲಕ್ಷ್ಮೀದೇವಿಯೇ ಈ ಕೃಪೆಯ ಸ್ವರೂಪ.

ಕೃಪಾಳುವಾದ ನಾರಾಯಣನು ಭಕ್ತರ ಅನುಗ್ರಹಕ್ಕೋಸ್ಕರವಾಗಿ ರಾಮ, ಕೃಷ್ಣ ಮೊದಲಾದ ಅವತಾರಗಳನ್ನು ಎತ್ತಿ ಮನುಷ್ಯರೂಪದಿಂದ

ಬಂದದ್ದಲ್ಲದೆ, ಕಲ್ಲು, ಮರ, ಲೋಹ ಮುಂತಾದವುಗಳ ಪ್ರತಿಮೆಗಳಲ್ಲಿ 'ಅರ್ಚಾರೂಪ'ವಾಗಿ ನಿಂದು, ಭಕ್ತಪರಾಧೀನನಾಗಿ ತನ್ನ ಸೌಶೀಲ್ಯ, ಸೌಲಭ್ಯ, ವಾತ್ಸಲ್ಯಗಳನ್ನು ಪ್ರಕಟಪಡಿಸಿರುವನು. ಸಹಜವಾಗಿ ತನಗೆ ಆಕಾರಗಳಿಲ್ಲ ದಿದ್ದರೂ ತನ್ನ ಭಕ್ತರಿಗಾಗಿ ವಿವಿಧವಾದ ರೂಪ ಆಕಾರಗಳನ್ನು ತಾಳುವನು.

ನಾರಾಯಣನ ವಾತ್ಸಲ್ಯ ನಾನಾ ಪ್ರಕಾರವಾದದ್ದು. ತಾನು ಭಕ್ತರಿಗೆ ತಂದೆಯಾಗಿ, ತಾಯಾಗಿ, ಮಿತ್ರನಾಗಿ, ಸ್ವಾಮಿಯಾಗಿ, ಪತಿಯಾಗಿ, ಗುರು ವಾಗಿ—ಅವರವರ ಅಭೀಷ್ಟಗಳಿಗೆ ಅನುಗುಣವಾಗಿ ಕಾಣಿಸಿಕೊಳ್ಳುವನು. ನಾರಾಯಣನು ಹೀಗೆ ಹೊರಗೆ ಕಾಣಿಸಿಕೊಳ್ಳುವುದು ಮಾತ್ರವಲ್ಲ; ಎಲ್ಲರ ಹೃದಯದಲ್ಲಿಯೂ ತಾನು ಅಂತರ್ಯಾಮಿಯಾಗಿದ್ದು, ಚಿತ್ತಶುದ್ಧಿ ಉಂಟಾದಲ್ಲಿ ಅಲ್ಲಿಯೇ ಗೋಚರನಾಗುವನು.

ಇಷ್ಟು ಸುಲಭನಾದ ಪರಮಾತ್ಮನ ಪಾದಸೇವೆಗಿಂತಲೂ ದೊಡ್ಡದಾದ ಪುರುಷಾರ್ಥವು ಜೀವಾತ್ಮನಿಗೆ ಬೇರೊಂದಿಲ್ಲ. ಜೀವಾತ್ಮನಿಗೂ ಪರಮಾತ್ಮ ನಿಗೂ ಕಳೆಯಲಾರದ ಪ್ರೇಮಸಂಬಂಧವುಂಟು. ಪರಮಾತ್ಮನ ಸ್ವರೂಪವೇ ಪ್ರೇಮವಾದದ್ದರಿಂದ, ಪ್ರೇಮದಿಂದಲೇ ಆತನನ್ನು ಸೇರುವುದು ಸುಲಭ.

ಅದಕ್ಕಾಗಿ ಇತರ ವಿಷಯಗಳಲ್ಲಿ ಆಶೆಯನ್ನು ತೊರೆದು, ಆಶೆಯನ್ನೆಲ್ಲ ಪರಮಾತ್ಮನಲ್ಲಿಗೆ ತಿರುವಬೇಕು. ದೇಹಕ್ಕಿಂತ ಭಿನ್ನವಾದ, ದೇಹದಂತೆ ನಶ್ವರವಲ್ಲದ ಆತ್ಮವಿದೆ ಎಂಬುದನ್ನು ಅರಿತು, 'ನಾನು' 'ನನ್ನದು' ಎಂಬ ಮಮತೆ ಅಹಂಕಾರಗಳನ್ನು ಕಳೆದು, ಮಾಡಬೇಕಾದ ಕರ್ಮಗಳನ್ನೆಲ್ಲ ನಾರಾ ಯಣನ ಕೈಂಕರ್ಯಗಳೆಂದೇ ಭಾವಿಸಿ ಫಲಾಪೇಕ್ಷೆಯಿಲ್ಲದೆ ಮಾಡಬೇಕು. ನಾರಾಯಣನಿಗೆ ಮಾಡಿದ ಕೈಂಕರ್ಯಕ್ಕೆ ಆ ಕೈಂಕರ್ಯ ಹೊರತಾಗಿ ಬೇರೆಯ ಪ್ರಯೋಜನವಿಲ್ಲ. ಅದಕ್ಕೆ ಪ್ರಯೋಜನ ಅದೇ.

ಹೀಗೆ ಭಗವಂತನ ಕೈಂಕರ್ಯ ಮಾಡಿದರೆ ಎಷ್ಟು ಪ್ರಯೋಜನವೋ ಭಗವಂತನ ಭಕ್ತರಾದ ಭಾಗವತರ ಕೈಂಕರ್ಯಮಾಡಿದರೂ ಅಷ್ಟೇ ಪ್ರಯೋ ಜನ ಎಂದು ತಿಳಿದು ನಡೆಯಬೇಕು.

ಈ ಪ್ರಕಾರವಾದ ಸಂಪೂರ್ಣ ಶರಣಾಗತಿಗೆ 'ಪ್ರಪತ್ತಿ' ಎಂದು ಹೆಸರು. ಇದು 'ಭಕ್ತಿ'ಗಿಂತ ಸುಲಭ. ಇದಕ್ಕೆ ಯಾವ ರೀತಿಯ ವರ್ಣ, ಲಿಂಗ, ವಿದ್ಯೆ ಎಂಬ ವ್ಯತ್ಯಾಸಗಳೂ ಇಲ್ಲದೆ ಎಲ್ಲರೂ ಅಧಿಕಾರಿಗಳೇ.

ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ
ಸ್ತ್ರೀಯೋ ವೈಶ್ಯಾಸ್ತಥಾ ಶೂದ್ರಾಃ ತೇಽಪಿ ಯಾಂತಿ ಪರಾಂಗತಿಂ

ಎಂದು ಗೀತೆಯಲ್ಲಿ ಶ್ರೀಕೃಷ್ಣ ಹೇಳಿದಂತೆ, ಎಂಥವರಾದರೂ, ಎಷ್ಟೇ ಪತಿತ ರಾದರೂ, ಪ್ರಪತ್ತಿಮಾರ್ಗವನ್ನು ಹಿಡಿದು ನಡೆದರೆ, ಅವರು ನಾರಾಯಣನ ತಿರುವಡಿಗಳನ್ನು ಸೇರುವರು.

ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ
ತಸ್ಮಾತ್ ಕಾರುಣ್ಯಭಾವೇನ ರಕ್ಷ ರಕ್ಷ ಜನಾರ್ದನ

'ನನಗೆ ಬೇರೆ ರಕ್ಷಕರಿಲ್ಲ, ನೀನೇ ನನಗೆ ರಕ್ಷಕನು. ಆದ್ದರಿಂದ, ಹೇ ಜನಾರ್ದನ, ಕಾರುಣ್ಯಭಾವದಿಂದ ನೀನು ನನ್ನನ್ನು ಕಾಪಾಡು, ಕಾಪಾಡು' ಎಂಬುದು ಇದೇ ಪ್ರಪನ್ನನ ಮನೋಧರ್ಮ, ಇದೇ ವೈಷ್ಣವನ ಆತ್ಮಸಮರ್ಪಣ.

ಇದೇ ಆಳ್ವಾರ್‌ಗಳು ಲೋಕಕ್ಕೆ ಬದುಕಿ ತೋರಿಸಿಕೊಟ್ಟು ಹೋದ ಸಂದೇಶ.

§

ಆಳ್ವಾರ್‌ಗಳ ಪ್ರಬಂಧಗಳನ್ನು 'ದ್ರಾವಿಡವೇದ' ಎಂದು ಕರೆಯುತ್ತಾರೆ. ಬ್ರಹ್ಮಸೂತ್ರಗಳೂ ಉಪನಿಷತ್ತುಗಳೂ ಭಗವದ್ಗೀತೆಯೂ ಹೇಳುವ ರಹಸ್ಯ ತ್ರಯವನ್ನೇ ಪ್ರಬಂಧಗಳೂ ಹೇಳುತ್ತವೆ ಎನ್ನುತ್ತಾರೆ. ಈ ಮಾತಿಗೆ ಉದಾ ಹರಣೆಯಾಗಿ, ಕುಲಶೇಖರ ಆಳ್ವಾರರು ರಚಿಸಿದ '**ಮುಕುಂದಮಾಲಾ**' ಸ್ತೋತ್ರದಲ್ಲಿ ಶ್ರೀಮದ್ಭಗವದ್ಗೀತೆಯ ಸಾರವನ್ನು ಸಂದರ್ಶಿಸಬಹುದು. ಗೀತೆಯ ಹದಿನೆಂಟು ಅಧ್ಯಾಯಗಳಿಗೆ ಕಾಲಾವಕಾಶವಿಲ್ಲದವರಿಗೆ ಇದರ ನಲವತ್ತು ಶ್ಲೋಕಗಳಲ್ಲಿ ಅದೇ ಮನಃಪ್ರಸಾದ ದೊರೆಕೊಳ್ಳುತ್ತದೆ.

ಇಂತಹ 'ಮುಕುಂದಮಾಲೆ'ಯನ್ನು ರಚಿಸಿದ ಶ್ರೀ ಕುಲಶೇಖರರು ಅನಂತಶಯನದ ರಾಜರಾಗಿದ್ದರು. ತಮಿಳಿನಲ್ಲಿಯೂ ಸಂಸ್ಕೃತದಲ್ಲಿಯೂ ವಿದ್ವಾಂಸರಾಗಿ, ಎರಡು ಭಾಷೆಗಳಲ್ಲೂ ತಮ್ಮ ಭಗವದನುಭವವನ್ನು ಹೇಳಿ ಕೊಂಡಿದ್ದಾರೆ. ಅವುಗಳಲ್ಲಿ ಒಂದಾದ 'ಮುಕುಂದಮಾಲೆ'ಯೆಂಬ ಈ ಸಂಸ್ಕೃತ ಪ್ರಬಂಧ ಭಾರತದಲ್ಲಿ ಎಲ್ಲಕಡೆಯೂ ಒಂದು ಅತ್ಯುತ್ಕೃಷ್ಟ ಸ್ತೋತ್ರವೆಂದು ಪರಿಗಣಿತವಾಗಿ ಪ್ರಚಾರದಲ್ಲಿದೆ.

ತಮಿಳುನಾಡಿನ ಹೊರಗಡೆ ಅಷ್ಟು ಪ್ರಚಾರವಾಗದಿರುವ ಇದೇ ಆಳ್ವಾರರ 'ಪೆರುಮಾಳ್ ತಿರುಮೊಳಿ' ಎಂಬ ಮುನ್ನೂರು ಪದ್ಯಗಳಲ್ಲಿ ಭಗವಂತನ ಬಗೆಗೆ ಅವರು ಬೆಳಸಿಕೊಂಡಿದ್ದ ಹಂಬಲದ ಪರಮಾವಧಿಯನ್ನು ಕಾಣಬಹುದು. ಅಲ್ಲಿ ಅವರು ಹೇಳುತ್ತಾರೆ :

"ತಾಯಿ ಕೋಪ ಬಂದಾಗ ಮಗುವನ್ನು ದೂರ ತಳ್ಳಿದರೂ, ತನ್ನ ತಾಯಿಯ ಪೂರ್ವದ ಪ್ರೀತಿಯನ್ನು ನೆನೆದು ಆ ಮಗು ಅವಳ ಕಾಲನ್ನೇ ಕಟ್ಟಿಕೊಂಡು ಅಳುವ ಹಾಗೆ, ನೀನು ತರುವ ದುಃಖವನ್ನು ನೀನೇ ಹೋಗಲಾಡಿಸುವೆಯಾದ್ದರಿಂದ, ಏನಾದರೂ ನಾನು ನಿನ್ನನ್ನು ಬಿಡಲೊಲ್ಲೆ.

"ನೋಡುವವರೆಲ್ಲರ ಎದುರಿಗೂ ತನ್ನ ಪ್ರಿಯನು ತನ್ನನ್ನು ಹೀಯಾಳಿಸಿದನಾದರೂ, ಕುಲಸ್ತ್ರೀಯಾದವಳು ಅವನನ್ನು ಬಿಟ್ಟು ಬೇರೊಬ್ಬನನ್ನು ಮನಸ್ಸಿನಲ್ಲಿಯೂ ನೆನೆಯದ ಹಾಗೆ, ನಿನ್ನ ಕೈಹಿಡಿದ ನಾನು, ನೀನು ನನ್ನ ಕೈಬಿಟ್ಟರೂ, ನೀನಲ್ಲದೆ ಅನ್ಯವನ್ನು ಎಂದಿಗೂ ಪ್ರೀತಿಸಲಾರೆ.

"ವೈದ್ಯನು ತನ್ನ ಮೈಯನ್ನು ಕತ್ತಿಯಿಂದ ಕುಯಿದು, ಕಾಸಿದ ಸೂಜಿಯಿಂದ ಚುಚ್ಚಿ ನೋಯಿಸಿದರೂ, ಆರೋಗ್ಯವಾಗಲು ಬಯಸುವ ರೋಗಿಯು ಅವನಲ್ಲೇ ನಂಬಿಕೆಯಿಡುವಂತೆ, ಪರಾತ್ಪರನಾದ ನಿನ್ನ ಮಾಯೆಯಿಂದ ನನ್ನ ದುಃಖ ದೀರ್ಘಕಾಲ ಬೆಳೆಯುವುದಾದರೂ, ನಿನ್ನಲ್ಲಿ ದಾಸಭಾವದಿಂದಿರುವ ನಾನು ನಿನ್ನ ಸೇವೆಗಾಗಿಯೆ ಕಾದು, ನಿನ್ನ ಕೃಪೆಯನ್ನೆ ಎದುರು ನೋಡುತ್ತಿರುತ್ತೇನೆ.

"ಮಳೆಯನ್ನು ಸುರಿಸದೆ ಮೇಘಗಳು ಎಷ್ಟು ಕಾಲ ತಮ್ಮನ್ನು ಮರೆತಿದ್ದರೂ, ಪಚ್ಚೆಯ ಪೈರು ಮಾತ್ರ ಕತ್ತೆತ್ತಿ ಮೇಲಿನ ಮೇಘವನ್ನೇ ನಿರೀಕ್ಷಿಸುವ ಹಾಗೆ, ಅನುಭವಿಸಿಯೇ ತೀರಬೇಕಾದ ನನ್ನ ದುಃಖವನ್ನು ನೀನು ಹೋಗಲಾಡಿಸದಿದ್ದರೂ, ನನ್ನ ಮನಸ್ಸು ನಿನ್ನ ಕಡೆಗೇ ಎದುರುನೋಡುತ್ತಿರುತ್ತದೆ."

ಇದರಂತೆಯೇ ತಿರುಪತಿ ಕ್ಷೇತ್ರದಲ್ಲಿ ಅವರು ಹಾಡಿದ ರಚನೆಗಳಲ್ಲಿಯೂ ಇದೇ ಹಂಬಲ ಕಂಡುಬರುತ್ತದೆ :

"ನನಗೆ ದ್ರವ್ಯವಾಗಲಿ, ಇಂದ್ರಿಯಸುಖಗಳಾಗಲಿ ಬೇಕಾಗಿಲ್ಲ. ನನಗೆ ಭೂಮಿಯ ರಾಜ್ಯವೂ ಬೇಡ, ಸ್ವರ್ಗದ ಸುಖಗಳೂ ಬೇಡ. ಓ ವೆಂಕಟಾದ್ರಿನಾಥಾ, ನಿನ್ನ ಬೆಟ್ಟದಲ್ಲಿ ನಾನು ವಾಸಿಸುವಂತಾದರೆ ಸಾಕು. ನಿನ್ನ ಪಾದ

ಗಳಿಡೆಗೆ ನಾನು ಒಂದು ಹಾದಿಯಾದರೆ ಸಾಕು; ಸುಗಂಧಪುಷ್ಪಗಳ ಮಳೆಗರೆಯುವ ನಿನ್ನ ಹೂದೋಟಗಳಿಗೆ ನೀರು ಒಯ್ಯುವ ನಾಲೆಯಾದರೆ ಸಾಕು; ಬೇಡ, ನಿನ್ನ ದೇವಾಲಯದ ಒಂದು ಕಂಬ ನಾನಾದರೂ ಸಾಕು. ಅಥವಾ, ನಿನ್ನ ಬೆಟ್ಟದ ಮೇಲೆ, ದುಂಬಿಗಳು ಬಂದು ಮುತ್ತಿಕೊಳ್ಳುವ ಒಂದು ಸಂಪಗೆ ಮರವಾದರೂ ಸಾಕು. ಇಲ್ಲವೆ, ಓ ವೆಂಕಟೇಶ, ನಿನ್ನ ದಿವ್ಯಪುಷ್ಕರಿಣಿಯಲ್ಲಿ ನಾನೊಂದು ಮೀನಾದರೂ ಸಾಕು. ಹವಳದ ತುಟಿಗಳ ಓ ವೆಂಕಟೇಶ, ನಿನ್ನ ಚಿನ್ನದ ಬೆಟ್ಟದ ಮೇಲೆ ನಾನು ಏನಾದರೂ ಒಂದು ವಸ್ತುವಾಗಿ, ನಿನ್ನ ಪಾದಗಳ ಸೇವೆಯನ್ನು ಮಾಡುತ್ತಿದ್ದರೆ ಸಾಕು."

ದೇವರನ್ನು ಕುರಿತ ಇದೇ ದಾಹವನ್ನೂ, ಆ ದಾಹದ ಪ್ರಶಮನವನ್ನೂ 'ಮುಕುಂದಮಾಲೆ'ಯಲ್ಲೂ ಕಾಣಬಹುದು. ಜಯದೇವಕವಿಯ 'ಗೀತಗೋವಿಂದ'ದ ಹಾಗೆ, ಲೀಲಾಶುಕನ 'ಕೃಷ್ಣಕರ್ಣಾಮೃತ'ದ ಹಾಗೆ, ಕುಲಶೇಖರ ಆಳ್ವಾರರ 'ಮುಕುಂದಮಾಲೆ' ಕೂಡ ಭಕ್ತಿಗೀತೆಗಳನ್ನು ಹಾಡುವವರಿಗೂ ಅದನ್ನು ಕೇಳುವವರಿಗೂ ತುಂಬ ಪ್ರಿಯವಾದ ಸ್ತೋತ್ರಭಂಡಾರವಾಗಿ ಪ್ರಚಾರದಲ್ಲಿದೆ.

ಕೆಲವೋ ಹಲವೋ ಸ್ತೋತ್ರಗಳನ್ನು ಹೇಳಿಕೊಂಡು, ಭಗವದನುಭವ ಜನಿತವಾದ ಆನಂದದ ಪರವಶತೆಯನ್ನು ರುಚಿ ನೋಡಿದವರು ಮುಕುಂದಮಾಲೆಯ ಈ ಸಂಪೂರ್ಣ ಸ್ತೋತ್ರಮುಕ್ತಾಮಂಜರಿಯನ್ನು ಸಂತೋಷದಿಂದ ಸ್ವಾಗತಿಸುವರೆಂಬ ಭರವಸೆ ನನಗುಂಟು. ದೇವರ ಪಾದಾರವಿಂದಗಳಲ್ಲಿ ಸೇರಿದ ಶ್ರೀ ಎನ್. ಜಿ. ಲಕ್ಷ್ಮೀನರಸಿಂಹ ಅಯ್ಯಂಗಾರ್ಯರಂತೆಯೇ ಅವರ ಪ್ರೀತಿಯ ಮಕ್ಕಳೂ ಮೊಮ್ಮಕ್ಕಳೂ ಈ ಮುಕುಂದಮಾಲೆಯನ್ನು ನಿತ್ಯವೂ ಅನುಸಂಧಾನಮಾಡಿ ಚಿತ್ತಶುದ್ಧಿಯನ್ನು ಬೆಳಸಿಕೊಳ್ಳಲಿ ಎಂಬ ಮೂಲೋದ್ದೇಶದಿಂದ ಇದು ಈಗ ಪ್ರಕಟವಾಗಿರುವುದಾದರೂ—ಚಿತ್ತಶುದ್ಧಿಯನ್ನು ಬಯಸುವ ಭಕ್ತಿಪ್ರಿಯರೆಲ್ಲರಿಗೂ ಇದು ಉಪಾದೇಯವಾಗುತ್ತದೆ ಎಂಬ ಭರವಸೆಯಿಂದ ನನ್ನ ಮೊದಲ ಮಾತನ್ನು ಇಲ್ಲಿಗೆ ನಿಲ್ಲಿಸುತ್ತೇನೆ.

೭-೧೨-೫೫. }
ಮಲ್ಲೇಶ್ವರಂ. }

ಜಿ. ಪಿ. ರಾಜರತ್ನಂ.

# ಕೃಷ್ಣಂ ವಂದೇ ಜಗದ್ಗುರುಂ

೧

ವಸುದೇವಸುತಂ ದೇವಂ ಕಂಸಚಾಣೂರಮರ್ದನಂ
ದೇವಕೀಪರಮಾನಂದಂ ಕೃಷ್ಣಂ ವಂದೇ ಜಗದ್ಗುರುಂ

ವಸುದೇವನ ಮಗನಾದ ದೇವನನ್ನು, ಕಂಸಚಾಣೂರರನ್ನು ಮರ್ದನ ಮಾಡಿದವನನ್ನು, ದೇವಕಿಗೆ ಪರಮಾನಂದ ಉಂಟುಮಾಡಿದವನನ್ನು—ಜಗದ್ಗುರುವಾದ ಕೃಷ್ಣನನ್ನು ವಂದಿಸುತ್ತೇನೆ.

೨

ಅತಸೀಪುಷ್ಪಸಂಕಾಶಂ ಹಾರನೂಪುರಶೋಭಿತಂ
ರತ್ನಕಂಕಣಕೇಯೂರಂ ಕೃಷ್ಣಂ ವಂದೇ ಜಗದ್ಗುರುಂ

ಕರಿಯಗಸೆಯ ಹೂವಿನ ಕಾಂತಿಯುಳ್ಳವನನ್ನು, ಕೊರಳಹಾರದಿಂದಲೂ ಕಾಲುಗೆಜ್ಜೆಗಳಿಂದಲೂ ಕಂಗೊಳಿಸುವವನನ್ನು, ರತ್ನದ ಕೈಬಳೆಗಳು ಭುಜಕೀರ್ತಿಗಳು ಉಳ್ಳವನನ್ನು—ಜಗದ್ಗುರುವಾದ ಕೃಷ್ಣನನ್ನು ವಂದಿಸುತ್ತೇನೆ.

೩

ಕುಟಿಲಾಲಕಸಂಯುಕ್ತಂ ಪೂರ್ಣಚಂದ್ರನಿಭಾನನಂ
ವಿಲಸತ್ಕುಂಡಲಧರಂ ಕೃಷ್ಣಂ ವಂದೇ ಜಗದ್ಗುರುಂ

ಗುಂಗುರಾದ ಮುಂಗುರುಳುಗಳಿಂದ ಕೂಡಿದವನನ್ನು, ಪೂರ್ಣ ಚಂದ್ರನಿಗೆ ಸಮಾನವಾದ ಮುಖವುಳ್ಳವನನ್ನು, ಹೊಳೆಯುವ ಕಿವಿಯೊಡವೆಗಳನ್ನು ಧರಿಸಿದವನನ್ನು—ಜಗದ್ಗುರುವಾದ ಕೃಷ್ಣನನ್ನು ವಂದಿಸುತ್ತೇನೆ.

೪

ಮಂದಾರಗಂಧಸಂಯುಕ್ತಂ ಚಾರುಹಾಸಂ ಚತುರ್ಭುಜಂ
ಬರ್ಹಿಪಿಂಛಾವಚೂಡಾಂಕಂ ಕೃಷ್ಣಂ ವಂದೇ ಜಗದ್ಗುರುಂ

ಮಂದಾರಪುಷ್ಪದ ಗಂಧದಿಂದ ಕೂಡಿದವನನ್ನು, ಮನೋಹರವಾದ ನಗುವುಳ್ಳವನನ್ನು, ನಾಲ್ಕು ಭುಜಗಳು ಪಡೆದವನನ್ನು, ತಲೆಯ ಕೂದಲಿನಲ್ಲಿ ನವಿಲುಗರಿ ಸಿಕ್ಕಿಸಿದವನನ್ನು—ಜಗದ್ಗುರುವಾದ ಕೃಷ್ಣನನ್ನು ವಂದಿಸುತ್ತೇನೆ.

೫

ಉತ್ಫುಲ್ಲಪದ್ಮಪತ್ರಾಕ್ಷಂ ನೀಲಜೀಮೂತಸನ್ನಿಭಂ
ಯಾದವಾನಾಂ ಶಿರೋರತ್ನಂ ಕೃಷ್ಣಂ ವಂದೇ ಜಗದ್ಗುರುಂ

ಚೆನ್ನಾಗಿ ಅರಳಿದ ಪದ್ಮದ ದಳದಂತೆ ಕಣ್ಣುಗಳುಳ್ಳವನನ್ನು, ನೀಲಿಯ ಮೇಘಕ್ಕೆ ಸಮಾನವಾದ ಮೈಯುಳ್ಳವನನ್ನು, ಯಾದವರ ಕುಲಕ್ಕೆ ತಲೆಯೊಡವೆಯಾದವನನ್ನು—ಜಗದ್ಗುರುವಾದ ಕೃಷ್ಣನನ್ನು ವಂದಿಸುತ್ತೇನೆ.

೬

ರುಕ್ಮಿಣೀಕೇಳಿಸಂಯುಕ್ತಂ ಪೀತಾಂಬರಸುಶೋಭಿತಂ
ಅವಾಪ್ತತುಲಸೀಗಂಧಂ ಕೃಷ್ಣಂ ವಂದೇ ಜಗದ್ಗುರುಂ

ರುಕ್ಮಿಣಿಯೊಡನೆ ಕೂಡಿ ಆಡುತ್ತಿರುವವನನ್ನು, ಪೀತಾಂಬರದಿಂದ ಕಂಗೊಳಿಸುವವನನ್ನು, ತುಲಸಿಯ ಗಂಧವನ್ನು ಹೊಂದಿದವನನ್ನು—ಜಗದ್ಗುರುವಾದ ಕೃಷ್ಣನನ್ನು ವಂದಿಸುತ್ತೇನೆ.

೭

ಗೋಪಿಕಾನಾಂ ಕುಚದ್ವಂದ್ವಕುಂಕುಮಾಂಕಿತವಕ್ಷಸಂ
ಶ್ರೀನಿಕೇತಂ ಮಹೇಷ್ವಾಸಂ ಕೃಷ್ಣಂ ವಂದೇ ಜಗದ್ಗುರುಂ

ಗೋಪಾಲಕಿಯರ ಕುಚದ್ವಂದ್ವಗಳ ಕುಂಕುಮದಿಂದ ಅಲಂಕರಿಸಲ್ಪಟ್ಟ ವಕ್ಷಃಸ್ಥಲವುಳ್ಳವನನ್ನು, ಲಕ್ಷ್ಮಿಗೆ (ತನ್ನ ವಕ್ಷಃಸ್ಥಲವೇ) ಮನೆಯಾದವನನ್ನು, ಮಹಾಧನುರ್ಧರನನ್ನು—ಜಗದ್ಗುರುವಾದ ಕೃಷ್ಣನನ್ನು ವಂದಿಸುತ್ತೇನೆ.

೮

ಶ್ರೀವತ್ಸಾಂಕಂ ಮಹೋರಸ್ಕಂ ವನಮಾಲಾವಿರಾಜಿತಂ
ಶಂಖಚಕ್ರಧರಂ ದೇವಂ ಕೃಷ್ಣಂ ವಂದೇ ಜಗದ್ಗುರುಂ

ಶ್ರೀವತ್ಸದ ಗುರುತು ಉಳ್ಳವನನ್ನು, ವಿಶಾಲವಾದ ವಕ್ಷವುಳ್ಳವನನ್ನು, ವನಮಾಲೆಯಿಂದ ವಿರಾಜಿತನಾದವನನ್ನು, ಶಂಖಚಕ್ರಗಳನ್ನು ಧರಿಸಿದವನನ್ನು—ಜಗದ್ಗುರುವಾದ ಕೃಷ್ಣನನ್ನು ವಂದಿಸುತ್ತೇನೆ.

## ಶ್ರೀ ಕುಲಶೇಖರ ಆಳ್ವಾರರು ಕರುಣಿಸಿದ

## ಮುಕುಂದಮಾಲಾ ಸ್ತೋತ್ರ

ಘುಷ್ಯತೇ ಯಸ್ಯ ನಗರೇ ರಂಗಯಾತ್ರಾ ದಿನೇ ದಿನೇ
ತಮಹಂ ಶಿರಸಾ ವಂದೇ ರಾಜಾನಂ ಕುಲಶೇಖರಂ

ಯಾರ ನಗರದಲ್ಲಿ ಶ್ರೀರಂಗಯಾತ್ರೆಯು ದಿನೇದಿನೇ ಘೋಷಿಸಲ್ಪಡುತ್ತಿರುವುದೋ—ಆ ಕುಲಶೇಖರ ರಾಜನನ್ನು ನಾನು ಶಿರಸಾ ವಂದಿಸುತ್ತೇನೆ.

೧

ಶ್ರೀವಲ್ಲಭೇತಿ ವರದೇತಿ ದಯಾಪರೇತಿ
ಭಕ್ತಪ್ರಿಯೇತಿ ಭವಲುಂಠನಕೋವಿದೇತಿ
ನಾಥೇತಿ ನಾಗಶಯನೇತಿ ಜಗನ್ನಿವಾಸೇ–
ತ್ಯಾಲಾಪನಂ ಪ್ರತಿಪದಂ ಕುರು ಮೇ ಮುಕುಂದ

ಹೇ ಮುಕುಂದ ! 'ಶ್ರೀವಲ್ಲಭ' (ಲಕ್ಷ್ಮಿಗೆ ಪ್ರಿಯನಾದವನೆ) ಎಂದು, 'ವರದ' (ವರಗಳನ್ನು ಕೊಡುವವನೆ) ಎಂದು, 'ದಯಾಪರ' (ಕರುಣಾಳು) ಎಂದು, 'ಭಕ್ತಪ್ರಿಯ' ಎಂದು, 'ಭವ-ಲುಂಠನ-ಕೋವಿದ' (ಜನನ ಮರಣಗಳೆಂಬ ಸಂಸಾರವನ್ನು ನಾಶಮಾಡುವುದರಲ್ಲಿ ಸಮರ್ಥನೆ) ಎಂದು, 'ನಾಥ' (ಸ್ವಾಮಿಯೆ) ಎಂದು, 'ನಾಗಶಯನ' (ಶೇಷನ ಮೇಲೆ ಮಲಗಿದವನೆ) ಎಂದು, 'ಜಗನ್ನಿವಾಸ' (ಜಗವೇ ಮನೆಯಾದವನೆ) ಎಂದು ಹೆಜ್ಜೆಹೆಜ್ಜೆಗೂ ನಾನು ಹೇಳುತ್ತಿರುವ ಹಾಗೆ ನೀನು ನನ್ನಲ್ಲಿ (ಕೃಪೆ) ಮಾಡು.

೨

ಜಯತು ಜಯತು ದೇವೋ ದೇವಕೀನಂದನೋಽಯಂ
ಜಯತು ಜಯತು ಕೃಷ್ಣೋ ವೃಷ್ಣಿವಂಶಪ್ರದೀಪಃ
ಜಯತು ಜಯತು ಮೇಘಶ್ಯಾಮಲಃ ಕೋಮಲಾಂಗೋ
ಜಯತು ಜಯತು ಪೃಥ್ವೀಭಾರನಾಶೋ ಮುಕುಂದಃ

ದೇವಕಿಗೆ ನಂದನ (ಸಂತೋಷವನ್ನುಂಟುಮಾಡುವ ಮಗ)ನಾದ ಈ ದೇವನು ಜಯಿಸಲಿ, ಜಯಿಸಲಿ! ವೃಷ್ಣಿಗಳ ವಂಶಕ್ಕೆ ಪ್ರದೀಪ (ದೊಡ್ಡ ಬೆಳಕು) ಆದ ಕೃಷ್ಣನು ಜಯಿಸಲಿ, ಜಯಿಸಲಿ! ಮೇಘದಂತೆ ಶ್ಯಾಮಲವೂ (ಹಿತವಾದ ಕಪ್ಪು) ಕೋಮಲವೂ ಆದ ಅಂಗಗಳುಳ್ಳವನು ಜಯಿಸಲಿ, ಜಯಿಸಲಿ! ಪೃಥ್ವಿಯ ಭಾರವನ್ನು ನಾಶಮಾಡಿದ ಮುಕುಂದನು ಜಯಿಸಲಿ, ಜಯಿಸಲಿ!

೩

ಮುಕುಂದ ಮೂರ್ಧ್ನಾ ಪ್ರಣಿಪತ್ಯ ಯಾಚೇ
ಭವಂತಮೇಕಾಂತಮಿಯಂತಮರ್ಥಂ
ಅವಿಸ್ಮೃತಿಸ್ತ್ವಚ್ಚರಣಾರವಿಂದೇ
ಭವೇ ಭವೇ ಮೇಽಸ್ತು ಭವತ್ಪ್ರಸಾದಾತ್

ಹೇ ಮುಕುಂದ! ನಿನಗೆ ಶಿರಸಾ ನಮಸ್ಕಾರಮಾಡಿ, ಏಕಾಂತದಲ್ಲಿ ನಿನ್ನನ್ನು ಇಷ್ಟು ಮಾತ್ರ ಅರ್ಥ (ಇಷ್ಟಾರ್ಥ) ಬೇಡಿಕೊಳ್ಳುತ್ತೇನೆ: ನಿನ್ನ ಚರಣಾರವಿಂದದಲ್ಲಿ ಅವಿಸ್ಮೃತಿಯು (ಮರೆವಿಲ್ಲದೆ ಎಚ್ಚರದಿಂದಿರುವುದು) ಭವ ಭವ (ಜನ್ಮಜನ್ಮ) ದಲ್ಲಿಯೂ ನಿನ್ನ ಪ್ರಸಾದ (ಅನುಗ್ರಹ) ದಿಂದ ನನಗೆ ಉಂಟಾಗಲಿ.

೪

ನಾಹಂ ವಂದೇ ತವಚರಣಯೋರ್ದ್ವಂದ್ವಮದ್ವಂದ್ವಹೇತೋಃ
ಕುಂಭೀಪಾಕಂ ಗುರುಮಪಿ ಹರೇ ನಾರಕಂ ನಾಪನೇತುಂ
ರಮ್ಯಾ ರಾಮಾ ಮೃದುತನುಲತಾ ನಂದನೇ ನಾಪಿ ರಂತುಂ
ಭಾವೇ ಭಾವೇ ಹೃದಯಭವನೇ ಭಾವಯೇಯಂ ಭವಂತಂ.

ಹೇ ಹರಿಯೆ! (ಸುಖದುಃಖ, ಲಾಭಾಲಾಭ, ಮಾನಾಪಮಾನಗಳೆಂಬ) ದ್ವಂದ್ವಗಳನ್ನು ಕಳೆದುಕೊಳ್ಳುವುದಕ್ಕೋಸ್ಕರ ನಾನು ನಿನ್ನ ಚರಣದ್ವಂದ್ವಗಳಿಗೆ ವಂದಿಸುವುದಿಲ್ಲ; ಕುಂಭೀಪಾಕ(ವೆಂಬ) ನರಕವು ದೊಡ್ಡದಾದರೂ ಅದನ್ನು ಪರಿಹರಿಸಿಕೊಳ್ಳುವುದಕ್ಕಾಗಿಯೂ (ನಾನು ವಂದಿಸುವುದಿಲ್ಲ); (ಇಂದ್ರನ) ನಂದನ (ವನ) ದಲ್ಲಿ ಮೃದುವಾದ ಮೈಬಳ್ಳಿಗಳನ್ನು ಹೊಂದಿ ರಮ್ಯವಾಗಿರುವ

ರಾಮೆ (ಸುಂದರಿ) ಯರೊಡನೆ ರಮಿಸುವುದಕ್ಕಾಗಿಯೂ (ನಾನು ವಂದಿಸು ತ್ತಿಲ್ಲ.) ಭವಭವ (ಜನ್ಮಜನ್ಮ) ದಲ್ಲಿಯೂ ನನ್ನ ಹೃದಯಭವನದಲ್ಲಿ ನಿನ್ನನ್ನು ಭಾವಿಸುತ್ತಿರುವೆನು. (ಅದು ಈಡೇರಲೆಂದು ನಾನು ವಂದಿಸುವುದು.)

೫

ನಾಸ್ಥಾ ಧರ್ಮೇ ನ ವಸುನಿಚಯೇ ನೈವ ಕಾಮೋಪಭೋಗೇ
ಯದ್ಯದ್ಭವ್ಯಂ ಭವತು ಭಗವನ್ ಪೂರ್ವಕರ್ಮಾನುರೂಪಂ
ಏತತ್ಪ್ರಾರ್ಥ್ಯಂ ಮಮ ಬಹುಮತಂ ಜನ್ಮಜನ್ಮಾಂತರೇಽಪಿ
ತ್ವತ್ಪಾದಾಂಭೋರುಹಯುಗಗತಾ ನಿಶ್ಚಲಾಭಕ್ತಿರಸ್ತು

ಧರ್ಮದಲ್ಲಿಯಾಗಲಿ, ಧನದ ರಾಶಿಯಲ್ಲಾಗಲಿ, ಕಾಮಗಳ ಉಪ ಭೋಗದಲ್ಲಿಯಾಗಲಿ (ನನಗೆ) ಆಸ್ಥೆ (ಆಸ್ಕರೆ) ಇಲ್ಲ. ಭಗವನ್ ! ಪೂರ್ವ ಕರ್ಮಕ್ಕೆ ಅನುರೂಪವಾದದ್ದು ಏನೇನು ಆಗಬೇಕಾಗಿದೆಯೋ ಅದೆಲ್ಲಾ ಆಗಲಿ. ಇದನ್ನು (ಇಷ್ಟನ್ನು) ನಾನು ಬೇಡಿಕೊಳ್ಳಬೇಕಾದದ್ದು ಮತ್ತು ಇದು ನನಗೆ ಬಹು ಇಷ್ಟ : (ಅದು ಏನೆಂದರೆ)—ಜನ್ಮಜನ್ಮಾಂತರಗಳಲ್ಲಿಯಾದರೂ ನಿನ್ನ ಪಾದಕಮಲಗಳೆರಡರಲ್ಲಿ ಹೋಗಿ ನಿಲ್ಲುವ ನಿಶ್ಚಲಭಕ್ತಿ ನನಗೆ ಉಂಟಾಗಲಿ.

೬

ದಿವಿ ವಾ ಭುವಿ ವಾ ಮಮಾಸ್ತು ವಾಸೋ
ನರಕೇ ವಾ ನರಕಾಂತಕ ಪ್ರಕಾಮಂ
ಅವಧೀರಿತಶಾರದಾರವಿಂದೌ
ಚರಣೌ ತೇ ಮರಣೇಽಪಿ ಚಿಂತಯಾಮಿ

ಹೇ ನರಕಾಂತಕ ! ನಾನು ವಾಸಮಾಡುವುದು ಸ್ವರ್ಗದಲ್ಲಿಯಾಗಲಿ, ಅಥವಾ ಭೂಮಿಯಲ್ಲಿ (ಆಗಲಿ), ಅಥವಾ ಇಷ್ಟಬಂದ ನರಕದಲ್ಲಿ (ಆಗಲಿ), (ಎಲ್ಲೇ ಆದರೂ) ಶರತ್ಕಾಲದ ಅರವಿಂದಗಳನ್ನು ಧಿಕ್ಕರಿಸುವ ನಿನ್ನ ಚರಣ ಗಳೆರಡನ್ನು ನಾನು ಮರಣದಲ್ಲಿ ಕೂಡ ಚಿಂತಿಸುತ್ತೇನೆ.

೭

ಕೃಷ್ಣ ತ್ವದೀಯ ಪದಪಂಕಜಪಂಜರಾಂತ-
ಮದ್ಯೈವ ಮೇ ವಿಶತು ಮಾನಸರಾಜಹಂಸಃ

ಪ್ರಾಣಪ್ರಯಾಣಸಮಯೇ ಕಫವಾತಪಿತ್ತೈಃ
ಕಂಠಾವರೋಧನವಿಧೌ ಸ್ಮರಣಂ ಕುತಸ್ತೇ

ಹೇ ಕೃಷ್ಣ ! ನಿನ್ನ ಪಾದಪದ್ಮಗಳೆಂಬ ಪಂಜರದ ಒಳಕ್ಕೆ ನನ್ನ ಮನಸ್ಸೆಂಬ ರಾಜಹಂಸವು ಈಗಲೇ ಪ್ರವೇಶಮಾಡಲಿ. ಪ್ರಾಣವು (ದೇಹವನ್ನು ಬಿಟ್ಟು) ಪ್ರಯಾಣಮಾಡುವ ಸಮಯದಲ್ಲಿ ಕಫ ವಾತ ಪಿತ್ತಗಳಿಂದ ಗಂಟಲು ಕಟ್ಟಿಕೊಂಡು ಹೋದಾಗ, ನಿನ್ನ ಸ್ಮರಣೆ ಎಲ್ಲಿ ಬಂದೀತು ?

೮

ಚಿಂತಯಾಮಿ ಹರಿಮೇವ ಸಂತತಂ
ಮಂದಮಂದಹಸಿತಾನನಾಂಬುಜಂ
ನಂದಗೋಪತನಯಂ ಪರಾತ್ಪರಂ
ನಾರದಾದಿಮುನಿಬೃಂದವಂದಿತಂ

ಮಂದಹಾಸದ ಮೇಲೆ ಮಂದಹಾಸವನ್ನುಳ್ಳ ಮುಖಪದ್ಮದಿಂದ ಕೂಡಿದವನೂ, ನಂದಗೋಪನ ಮಗನೂ, ಪರಾತ್ಪರನೂ, ನಾರದನೇ ಮೊದಲಾದ ಮುನಿಗಳ ವೃಂದ (ಸಮೂಹ)ದಿಂದ ವಂದಿತನೂ ಆದ ಹರಿಯನ್ನೇ ನಾನು ಸಂತತವೂ ಚಿಂತಿಸುತ್ತೇನೆ.

೯

ಕರಚರಣಸರೋಜೇ ಕಾಂತಿಮನ್ನೇತ್ರಮೀನೇ
ಶ್ರಮಮುಷಿಭುಜವೀಚಿವ್ಯಾಕುಲೇಽಗಾಧಮಾರ್ಗೇ
ಹರಿಸರಸಿ ವಿಗಾಹ್ಯಾಪೀಯ ತೇಜೋಜಲೌಘಂ
ಭವಮರುಪರಿಖಿನ್ನಃ ಖೇದಮದ್ಯ ತ್ಯಜಾಮಿ

ಕೈಕಾಲುಗಳೆಂಬ ಕಮಲಗಳನ್ನು ಹೊಂದಿ, ಕಾಂತಿಯುಕ್ತವಾದ ಕಣ್ಣುಗಳೆಂಬ ಮೀನುಗಳಿಂದ ಕೂಡಿ, ಶ್ರಮವನ್ನು ಹೋಗಲಾಡಿಸುವ ಭುಜಗಳೆಂಬ ಅಲೆಗಳಿಂದ ಕಲಕುತ್ತ, ಅಗಾಧವಾದ ಮಾರ್ಗವುಳ್ಳ ಹರಿಯೆಂಬ ಸರೋವರದಲ್ಲಿ ಮುಳುಗಿ, (ಆ ಹರಿಯ) ತೇಜಸ್ಸೆಂಬ ನೀರಿನ ರಾಶಿಯನ್ನು ಕುಡಿದು, (ಇದುವರೆಗೆ) ಭವ (ಸಂಸಾರ) ವೆಂಬ ಮರುಭೂಮಿಯಲ್ಲಿ ಬಹು ಖೇದಗೊಂಡಿರುವ ನಾನು ಈಗ ಆ ಖೇದವನ್ನು ತ್ಯಜಿಸುವೆನು.

೧೦

ಸರಸಿಜನಯನೇ ಸಶಂಖಚಕ್ರೇ
ಮುರಭಿದಿ ಮಾ ವಿರಮಸ್ವ ಚಿತ್ತ ರಂತುಂ
ಸುಖಕರಮಪರಂ ನ ಜಾತು ಜಾನೇ
ಹರಿಚರಣಸ್ಮರಣಾಮೃತೇನ ತುಲ್ಯಂ

ಹೇ ಚಿತ್ತವೆ ! ಕಮಲದಂತೆ ಕಣ್ಣುಗಳುಳ್ಳವನೂ ಶಂಖಚಕ್ರಗಳನ್ನು ಹೊಂದಿದವನೂ ಆದ ಮುರಮಥನನಲ್ಲಿ ನೀನು ರಮಿಸುವುದನ್ನು ನಿಲ್ಲಿಸಬೇಡ. ಹರಿಯ ಚರಣಗಳ ಸ್ಮರಣಾಮೃತಕ್ಕಿಂತ ಬೇರೆ ಸುಖಕರವಾದದ್ದನ್ನು, ಅದಕ್ಕೆ ಸಮಾನವಾದದ್ದನ್ನು, ನಾನು ಎಂದಿಗೂ ಅರಿಯೆ.

೧೧

ಮಾಭೀರ್ಮಂದಮನೋ ವಿಚಿಂತ್ಯ ಬಹುಧಾ ಯಾಮೀಶ್ಚಿರಂ ಯಾತನಾಃ
ನಾಮೀ ನಃ ಪ್ರಭವಂತಿ ಪಾಪರಿಪವಃ ಸ್ವಾಮೀ ನನು ಶ್ರೀಧರಃ
ಆಲಸ್ಯಂ ವ್ಯಪನೀಯ ಭಕ್ತಿಸುಲಭಂ ಧ್ಯಾಯಸ್ವ ನಾರಾಯಣಂ
ಲೋಕಸ್ಯ ವ್ಯಸನಾಪನೋದನಕರೋ ದಾಸಸ್ಯ ಕಿಂ ನ ಕ್ಷಮಃ

ಎಲೈ ಮಂದಮನಸ್ಸೇ, ಯಮನಿಂದ ಆಗುವ ಯಾತನೆಗಳನ್ನು ಅನೇಕ ವಿಧವಾಗಿ ಚಿರಕಾಲ ಚಿಂತಿಸಿ ಭಯಗೊಳ್ಳಬೇಡ. ಈ ಪಾಪಗಳೆಂಬ ರಿಪುಗಳು ನಮ್ಮನ್ನು ಆಳಲಾರವು ; (ಏಕೆಂದರೆ) ಶ್ರೀಧರನು ನಮಗೆ ಸ್ವಾಮಿಯಲ್ಲವೆ ? ಆಲಸ್ಯವನ್ನು ಕಳೆದುಕೊಂಡು, ಭಕ್ತಿಗೆ ಸುಲಭ(ವಾಗಿ ದೊರಕುವವ)ನಾದ ನಾರಾಯಣನನ್ನು ಧ್ಯಾನಮಾಡು. ಲೋಕದ ವ್ಯಥೆಯನ್ನು ಹೋಗಲಾಡಿಸುವಾತನು ದಾಸನದನ್ನು (ಅವನ ವ್ಯಥೆಯನ್ನು) ಹೋಗಲಾಡಿಸಲು ಸಮರ್ಥನಾಗನೆ ?

೧೨

ಭವಜಲಧಿಗತಾನಾಂ ದ್ವಂದ್ವವಾತಾಹತಾನಾಂ
ಸುತದುಹಿತೃಕಳತ್ರತ್ರಾಣಭಾರಾರ್ದಿತಾನಾಂ
ವಿಷಮವಿಷಯತೋಯೇ ಮಜ್ಜತಾಮಪ್ಲವಾನಾಂ
ಭವತು ಶರಣಮೇಕೋ ವಿಷ್ಣುಪೋತೋ ನರಾಣಾಂ

ಭವ (ಸಂಸಾರ)ವೆಂಬ ಸಮುದ್ರದಲ್ಲಿ ಹೋಗಿಬಿದ್ದು, (ಸುಖದುಃಖ, ಲಾಭಾಲಾಭ, ಮಾನಾಪಮಾನಗಳೆಂಬ) ದ್ವಂದ್ವಗಳ ಗಾಳಿಯೇಟಿಗೆ ಸಿಕ್ಕಿ, ಮಗ ಮಗಳು ಹೆಂಡತಿ ಇವರುಗಳನ್ನು ಪೋಷಿಸುವ ಭಾರದಿಂದ ನೊಂದು, ವಿಷಮವಾದ ವಿಷಯಗಳೆಂಬ ನೀರಿನಲ್ಲಿ ತೆಪ್ಪದ ಅವಲಂಬನವಿಲ್ಲದೆ ಮುಳುಗಿ ಹೋಗುತ್ತಿರುವ ಮನುಷ್ಯರಿಗೆ—ವಿಷ್ಣುವೆಂಬ ಅದೊಂದೇ ನಾವೆ ಶರಣಾಗಲಿ.

೧೩

ಭವಜಲಧಿಮಗಾಧಂ ದುಸ್ತರಂ ನಿಸ್ತರೇಯಂ
ಕಥಮಹಮಿತಿ ಚೇತೋ ಮಾ ಸ್ಮಗಾಃ ಕಾತರತ್ವಂ
ಸರಸಿಜದೃಶಿ ದೇವೇ ತಾವಕೀ ಭಕ್ತಿರೇಕಾ
ನರಕಭಿದಿ ನಿಷಣ್ಣಾ ತಾರಯಿಷ್ಯತ್ಯವಶ್ಯಂ

ಎಲೆ ಮನಸ್ಸೆ! 'ಅಗಾಧವೂ (ಆಳವೂ) ದುಸ್ತರವೂ (ದಾಟಲು ಕಠಿನವೂ) ಆದ ಭವ (ಸಂಸಾರ) ಸಾಗರವನ್ನು ನಾನು ಹೇಗೆ ದಾಟಿಯೇನು?' ಎಂದು ನೀನು ಕಾತರತೆಯನ್ನು ಹೊಂದಬೇಡ. ತಾವರೆಯಂತೆ ಕಣ್ಣುಗಳುಳ್ಳ ನರಕಾಂತಕನಾದ ದೇವನಲ್ಲಿ ನೀನು ನೆಲೆಗೊಳಿಸಿದ ನಿನ್ನ ಭಕ್ತಿಯೊಂದೇ ಅವಶ್ಯವಾಗಿ ನಿನ್ನನ್ನು ದಾಟಿಸುತ್ತದೆ.

೧೪

ತೃಷ್ಣಾ ತೋಯೇ ಮದನಪವನೋದ್ಧೂತಮೋಹೋರ್ಮಿಮಾಲೇ
ದಾರಾವರ್ತೇ ತನಯಸಹಜಗ್ರಾಹಸಂಘಾಕುಲೇ ಚ
ಸಂಸಾರಾಖ್ಯೇ ಮಹತಿ ಜಲಧೌ ಮಜ್ಜತಾಂ ನಸ್ತ್ರಿಧಾಮನ್
ಪಾದಾಂಭೋಜೇ ವರದ ಭವತೋ ಭಕ್ತಿನಾವಂ ಪ್ರಯಚ್ಛ

ತೃಷ್ಣೆ (ಆಸೆ) ಯೆಂಬ ನೀರಿನಿಂದ ಕೂಡಿ, ಮನ್ಮಥನೆಂಬ ಗಾಳಿಯಿಂದ ಮೇಲೆಬ್ಬಿಸಲ್ಪಟ್ಟ ಮೋಹವೆಂಬ ಅಲೆಗಳನ್ನೊಳಕೊಂಡು, ಹೆಂಡತಿಯೆಂಬ ಸುಳಿಯನ್ನು ಉಳ್ಳದ್ದಾಗಿ, ಮಕ್ಕಳು ಒಡಹುಟ್ಟಿದವರು ಎಂಬ ಮೊಸಳೆಗಳ ಸಮೂಹದಿಂದ ತುಂಬಿ, ಸಂಸಾರವೆಂದು ಹೆಸರುಪಡೆದಿರುವ ಮಹಾಸಮುದ್ರದಲ್ಲಿ ಮುಳುಗುತ್ತಿರುವ ನಮಗೆ--(ಸಮುದ್ರ, ಸೂರ್ಯಮಂಡಲ ಮತ್ತು ಭಕ್ತರ ಹೃದಯ

ಎಂಬ) ಮೂರು ಧಾಮ (ವಾಸಸ್ಥಾನ)ಗಳನ್ನುಳ್ಳ ಹರಿಯೇ!—ವರದನೇ!—ನಿನ್ನ ಪಾದಕಮಲಗಳಲ್ಲಿ ಭಕ್ತಿ ಎಂಬ ನಾವೆಯನ್ನು ನನಗೆ ಕರುಣಿಸು.

೧೫

ಮಾದ್ರಾಕ್ಷಂ ಕ್ಷೀಣಪುಣ್ಯಾನ್ ಕ್ಷಣಮಪಿ ಭವತೋ
ಭಕ್ತಿಹೀನಾನ್ ಪದಾಬ್ಜೇ
ಮಾಶ್ರೌಷಂ ಶ್ರಾವ್ಯಬಂಧಂ ತವ ಚರಿತ-
ಮಪಾಸ್ಯಾನ್ಯದಾಖ್ಯಾನಜಾತಂ
ಮಾಸ್ಮಾರ್ಷಂ ಮಾಧವ ತ್ವಾಮಪಿ ಭುವನಪತೇ
ಚೇತಸಾಪಹ್ನುವಾನಾಂ
ಮಾ ಭೂವಂ ತ್ವತ್ಸಪರ್ಯಾವ್ಯತಿಕರರಹಿತೋ
ಜನ್ಮಜನ್ಮಾಂತರೇಽಪಿ

ನಿನ್ನ ಪಾದಕಮಲಗಳಲ್ಲಿ ಭಕ್ತಿಯಿಲ್ಲದೆ ಇರುವ ಕ್ಷೀಣಪುಣ್ಯರನ್ನು ಒಂದು ಕ್ಷಣ ಕೂಡ ನಾನು ನೋಡಲಾರೆ! ಕಿವಿಯಿಂದ ಕೇಳಲುತಕ್ಕ ರಚನೆಯುಳ್ಳ ನಿನ್ನ ಚರಿತವನ್ನು ಬಿಟ್ಟು, ಇತರ ಕತೆಗಳ ಗುಂಪನ್ನು ನಾನು ಕೇಳಲಾರೆ! ಭುವನಪತಿಯಾದ ಹೇ ಮಾಧವನೆ! ನಿನ್ನನ್ನು ಇಲ್ಲವೆಂಬರನ್ನು ನಾನು ಮನಸ್ಸಿನಿಂದ ನೆನೆಯಲೂ ಆರೆನು! ಈ ಜನ್ಮದಲ್ಲಿಯೂ ಮುಂದಿನ ಜನ್ಮಗಳಲ್ಲಿಯೂ ನಿನ್ನ ಪೂಜೆಯ ಸಂಬಂಧವನ್ನು ನಾನು ಬಿಟ್ಟಿರಲಾರೆನು!

೧೬

ಜಿಹ್ವೇ ಕೀರ್ತಯ ಕೇಶವಂ ಮುರರಿಪುಂ ಚೇತೋ ಭಜ ಶ್ರೀಧರಂ
ಪಾಣಿದ್ವಂದ್ವ ಸಮರ್ಚಯಾಚ್ಯುತಕಥಾಃ ಶ್ರೋತ್ರದ್ವಯ ತ್ವಂ ಶೃಣು
ಕೃಷ್ಣಂ ಲೋಕಯ ಲೋಚನದ್ವಯಹರೇರ್ಗಚ್ಛಾಂಘ್ರಿಯುಗ್ಮಾಲಯಂ
ಜಿಘ್ರ ಘ್ರಾಣ ಮುಕುಂದಪಾದತುಲಸೀಂ ಮೂರ್ಧನ್ನಮಾಧೋಕ್ಷಜಂ

ನಾಲಗೆಯೇ, ಕೇಶವನನ್ನು ಕೀರ್ತಿಸು. ಮನಸ್ಸೇ, ಮುರರಿಪುವನ್ನು ಭಜಿಸು. ಎರಡು ಕೈಯೇ, ಶ್ರೀಧರನನ್ನು ಚೆನ್ನಾಗಿ ಅರ್ಚಿಸು. ಎರಡು ಕಿವಿಯೇ, ಅಚ್ಯುತನ ಕಥೆಯನ್ನು ನೀನು ಕೇಳು. ಎರಡು ಕಣ್ಣೇ, ಕೃಷ್ಣನನ್ನು ಕಾಣು.

ಎರಡು ಕಾಲೇ, ಹರಿಯ ಆಲಯಕ್ಕೆ ಹೋಗು. ಮೂಗೇ, ಮುಕುದನಂ ಪಾದಗಳ ತುಲಸಿಯನ್ನು ಆಘ್ರಾಣಿಸು. ತಲೆಯೇ, ಅಧೋಕ್ಷಜ (ಇಂದ್ರಿಯ ವ್ಯಾಪಾರಗಳಿಲ್ಲದ ನಾರಾಯಣ)ನಿಗೆ ನಮಸ್ಕರಿಸು.

೧೭

ಹೇ ಲೋಕಾಃ ಶೃಣುತ ಪ್ರಸೂತಿಮರಣವ್ಯಾಧೇಶ್ಚಿಕಿತ್ಸಾಮಿಮಾಂ
ಯೋಗಜ್ಞಾಸ್ಸಮುದಾಹರಂತಿ ಮುನಯೋ
ಯಾಂ ಯಾಜ್ಞವಲ್ಕ್ಯಾದಯಃ
ಅಂತರ್ಜ್ಯೋತಿರಮೇಯಮೇಕಮಮೃತಂ
ಕೃಷ್ಣಾಖ್ಯಮಾಪೀಯತಾಂ
ತತ್ಪೀತಂ ಪರಮೌಷಧಂ ವಿತನುತೇ ನಿರ್ವಾಣಮಾತ್ಯಂತಿಕಂ

ಲೋಕದ ಜನಗಳೇ, ಯೋಗವನ್ನು ತಿಳಿದ ಯಾಜ್ಞ್ಯವಲ್ಕ್ಯ ಮೊದಲಾದ ಮುನಿಗಳು ಜನನ ಮರಣಗಳೆಂಬ ವ್ಯಾಧಿಗೆ ಯಾವ ಚಿಕಿತ್ಸೆಯನ್ನು ಹೇಳುತ್ತಾರೋ ಅದನ್ನು ಕೇಳಿರಿ. ಹೃದಯದೊಳಗೆ ಜ್ಯೋತಿಯಾಗಿದ್ದು ಅಮೇಯವೂ (ಅಳೆಯಬಾರದ್ದೂ) ಅದ್ವಿತೀಯವೂ ಆದ ಕೃಷ್ಣನೆಂಬ ಹೆಸರಿನ ಅಮೃತವನ್ನು ಪಾನಮಾಡಿರಿ. ಕುಡಿದ ಆ ಪರಮೌಷಧವು ಆತ್ಯಂತಿಕ (ಪರಿಪೂರ್ಣ)ವಾದ ನಿರ್ವಾಣ(ಸುಖ)ವನ್ನು ಉಂಟುಮಾಡುತ್ತದೆ.

೧೮

ಹೇ ಮರ್ತ್ಯಾಃ ಪರಮಂ ಹಿತಂ ಶೃಣುತ ವೋ ವಕ್ಷ್ಯಾಮಿ ಸಂಕ್ಷೇಪತಃ
ಸಂಸಾರಾರ್ಣವಮಾಪದೂರ್ಮಿ ಬಹುಳಂ ಸಮ್ಯಕ್ ಪ್ರವಿಶ್ಯ ಸ್ಥಿತಾಃ
ನಾನಾಜ್ಞಾನಮಪಾಸ್ಯ ಚೇತಸಿ ನಮೋ ನಾರಾಯಣಾಯೇತ್ಯಮುಂ
ಮಂತ್ರಂ ಸಪ್ರಣವಂ ಪ್ರಣಾಮಸಹಿತಂ ಪ್ರಾವರ್ತಯಧ್ವಂ ಮುಹುಃ

ಮರ್ತ್ಯರೆ, ಆಪತ್ತುಗಳೆಂಬ ಅಲೆಗಳಿಂದ ತುಂಬಿರುವ ಸಂಸಾರ ಸಮುದ್ರವನ್ನು ಚೆನ್ನಾಗಿ ಪ್ರವೇಶಿಸಿ ನೆಲಸಿರುವ ನಿಮಗೆ ಪರಮವಾದ ಹಿತವನ್ನು ಸಂಕ್ಷೇಪವಾಗಿ ಹೇಳುತ್ತೇನೆ, ಕೇಳಿರಿ. ನಾನಾ(ರೀತಿಯ) ಜ್ಞಾನವನ್ನು ಬಿಟ್ಟು,

ನಮೋ ನಾರಾಯಣಾಯ' ಎಂಬ ಈ ಮಂತ್ರವನ್ನು ಓಂಕಾರ ಸಹಿತವಾಗಿ ಪ್ರಣಾಮದೊಡನೆ ಬಾರಿಬಾರಿಗೂ ಮನಸ್ಸಿನಲ್ಲಿ ಚೆನ್ನಾಗಿ ತಿರುವಿಹಾಕಿರಿ.

೧೯

ಪೃಥ್ವೀ ರೇಣುರಣುಃ ಪಯಾಂಸಿ ಕಣಿಕಾಃ ಫಲ್ಗುಸ್ಫುಲಿಂಗೋ ಲಘುಃ
ತೇಜೋ ನಿಶ್ವಸನಂ ಮರುತ್ ತನುತರಂ ರಂಧ್ರಂ ಸುಸೂಕ್ಷ್ಮಂ ನಭಃ
ಕ್ಷುದ್ರಾ ರುದ್ರಪಿತಾಮಹಪ್ರಭೃತಯಃ ಕೀಟಾಸ್ಸಮಸ್ತಾಃ ಸುರಾಃ
ದೃಷ್ಟೇ ಯತ್ರ ಸ ತಾವಕೋ ವಿಜಯತೇ ಭೂಮಾವಧೂತಾವಧಿಃ

ಎಲ್ಲಿ (ನಿನ್ನ ಮಹಿಮೆಯನ್ನು) ನೋಡಿದರೆ—ಭೂಮಿಯು ರೇಣು ಅಣು ಆಗುತ್ತದೋ, (ಸಮುದ್ರದಂತಹ) ನೀರುಗಳು ತುಂತುರುಗಳಾಗುತ್ತವೋ, (ಸೂರ್ಯ ಚಂದ್ರ ಮುಂತಾದವರ) ತೇಜಸ್ಸು ನಿಸ್ಸಾರವೂ ಲಘುವೂ ಆದ ಕಿಡಿಯಾಗುತ್ತದೋ, ವಾಯುವು ಅತ್ಯಂತ ಸೂಕ್ಷ್ಮವಾದ ನಿಶ್ವಾಸವಾಗುತ್ತದೋ, ಆಕಾಶವು ತುಂಬ ಚಿಕ್ಕದಾದ ರಂಧ್ರವಾಗುತ್ತದೋ, ರುದ್ರ ಬ್ರಹ್ಮ ಮುಂತಾದವರು ಕ್ಷುದ್ರರಾಗುತ್ತಾರೋ, ಸಮಸ್ತ ಸುರರೂ ಕೀಟಗಳಾಗುತ್ತಾರೆಯೋ, ಅಂತಹ ಎಲ್ಲೆಯನ್ನು ಮೀರಿದ ನಿನ್ನ ಮಹಿಮೆಯು ವಿಜಯಿಸುತ್ತದೆ.

೨೦

ಬದ್ಧೇನಾಂಜಲಿನಾ ನತೇನ ಶಿರಸಾ ಗಾತ್ರೈಃ ಸರೋಮೋದ್ಗಮೈಃ
ಕಂಠೇನ ಸ್ವರಗದ್ಗದೇನ ನಯನೇನೋದ್ಗೀರ್ಣಬಾಷ್ಪಾಂಬುನಾ
ನಿತ್ಯಂ ತ್ವಚ್ಚರಣಾರವಿಂದಯುಗಳಧ್ಯಾನಾಮೃತಾಸ್ವಾದಿನಾಂ
ಅಸ್ಮಾಕಂ ಸರಸೀರುಹಾಕ್ಷ ಸತತಂ ಸಂಪದ್ಯತಾಂ ಜೀವಿತಂ

ಸರಸೀರುಹಾಕ್ಷನೆ, ಜೋಡಿಸಿದ ಕೈಬೊಗಸೆಯಿಂದಲೂ, ತಗ್ಗಿಸಿದ ತಲೆಯಿಂದಲೂ, ರೋಮಾಂಚವನ್ನು ಹೊಂದಿದ ಅವಯವಗಳಿಂದಲೂ, ಗದ್ಗದನಾದ ಸ್ವರವನ್ನುಳ್ಳ ಕಂಠದಿಂದಲೂ, ಹೊರಸೂಸುತ್ತಿರುವ ಕಣ್ಣೀರಿನಿಂದ ತುಂಬಿದ ಕಣ್ಣುಗಳಿಂದಲೂ ಕೂಡಿ ನಿತ್ಯವೂ ನಿನ್ನ ಚರಣಾರವಿಂದಗಳೆರಡರ ಧ್ಯಾನವೆಂಬ ಅಮೃತವನ್ನು ಆಸ್ವಾದನೆಮಾಡುತ್ತಿರುವ ನಮಗೆ, ಸದಾ ಕಾಲವೂ (ಇದೇ ರೀತಿಯ) ಜೀವಿತವು ಹೊಂದಿಕೊಂಡು ಬರಲಿ.

೨೧

ಹೇ ಗೋಪಾಲಕ ಹೇ ಕೃಪಾಜಲನಿಧೇ ಹೇ ಸಿಂಧುಕನ್ಯಾಪತೇ
ಹೇ ಕಂಸಾಂತಕ ಹೇ ಗಜೇಂದ್ರಕರುಣಾಪಾರೀಣ ಹೇ ಮಾಧವ
ಹೇ ರಾಮಾನುಜ ಹೇ ಜಗತ್ತ್ರಯಗುರೋ ಹೇ ಪುಂಡರೀಕಾಕ್ಷ ಮಾಂ
ಹೇ ಗೋಪೀಜನನಾಥ ಪಾಲಯ ಪರಂ ಜಾನಾಮಿ ನ ತ್ವಾಂ ವಿನಾ

ಎಲೈ ಗೋಪಾಲಕನೆ, ಎಲೈ ಕೃಪಾಸಮುದ್ರನೆ, ಎಲೈ ಸಮುದ್ರನ ಮಗಳಾದ ಲಕ್ಷ್ಮಿಯ ಪತಿಯೇ, ಎಲೈ ಕಂಸನನ್ನು ಕೊಂದವನೇ, ಎಲೈ ಗಜೇಂದ್ರನಲ್ಲಿ ಅತಿಶಯವಾದ ಕರುಣೆಯನ್ನು ತೋರಿದವನೇ, ಎಲೈ ಮಾಧವ (ಲಕ್ಷ್ಮೀಪತಿಯೇ), ಎಲೈ ಬಲರಾಮನ ತಮ್ಮನೇ, ಎಲೈ ಮೂರು ಲೋಕಗಳಿಗೂ ಗುರುವಾದವನೇ, ಎಲೈ ಕಮಲದಂತೆ ಕಣ್ಣುಳ್ಳವನೇ, ಎಲೈ ಗೋಪೀಜನಗಳ ಸ್ವಾಮಿಯೆ, ನನ್ನನ್ನು ಪಾಲಿಸು. ನಿನ್ನನ್ನು ಬಿಟ್ಟು ಬೇರೊಬ್ಬರನ್ನು ನಾನು ಅರಿಯೆ.

೨೨

ಭಕ್ತಾಪಾಯಭುಜಂಗಗಾರುಡಮಣಿಃ ತ್ರೈಲೋಕ್ಯರಕ್ಷಾಮಣಿಃ
ಗೋಪೀಲೋಚನಚಾತಕಾಂಬುದಮಣಿಃ ಸೌಂದರ್ಯಮುದ್ರಾಮಣಿಃ
ಯಃ ಕಾಂತಾಮಣಿರುಕ್ಮಿಣೀಘನಕುಚದ್ವಂದ್ವೈಕಭೂಷಾಮಣಿಃ
ಶ್ರೇಯೋ ದೇವಶಿಖಾಮಣಿರ್ದಿಶತು ನೋ ಗೋಪಾಲಚೂಡಾಮಣಿಃ

ಭಕ್ತರ ಅಪಾಯಗಳೆಂಬ ಸರ್ಪಕ್ಕೆ ಗರುಡಮಣಿಯೂ, ಮೂರು ಲೋಕಗಳ ರಕ್ಷಾಮಣಿಯೂ, ಗೋಪಿಯರ ಕಣ್ಣುಗಳೆಂಬ ಚಾತಕಗಳಿಗೆ (ನೀರನ್ನು ಕೊಡುವ) ಮೇಘಮಣಿಯೂ, ಕಾಂತಾಮಣಿಯಾದ ರುಕ್ಮಿಣಿಯ ಘನ ಕುಚದ್ವಂದ್ವಕ್ಕೆ ಏಕ ಭೂಷಾಮಣಿಯೂ, ದೇವಶಿಖಾಮಣಿಯೂ ಆದ ಗೋಪಾಲಚೂಡಾಮಣಿಯು ನಮಗೆ ಶ್ರೇಯಸ್ಸನ್ನು ನೀಡಲಿ.

೨೩

ಶತ್ರುಚ್ಛೇದೈಕಮಂತ್ರಂ ಸಕಲಮುಪನಿಷದ್ವಾಕ್ಯಸಂಪೂಜ್ಯಮಂತ್ರಂ
ಸಂಸಾರೋತ್ತಾರಮಂತ್ರಂ ಸಮುಪಚಿತತಮಸ್ಸಂಘನಿರ್ಯಾಣಮಂತ್ರಂ

ಸರ್ವೈಶ್ವರ್ಯೈಕಮಂತ್ರಂ ವ್ಯಸನಭುಜಗಸಂದಷ್ಟಸಂತ್ರಾಣಮಂತ್ರಂ
ಜಿಹ್ವೇ ಶ್ರೀಕೃಷ್ಣಮಂತ್ರಂ ಜಪ ಜಪ ಸತತಂ ಜನ್ಮಸಾಫಲ್ಯಮಂತ್ರಂ

ಶತ್ರುಗಳನ್ನು ಛೇದಿಸುವ ಏಕ ಮಂತ್ರವೂ, ಸಕಲ ಉಪನಿಷದ್ವಾಕ್ಯಗಳಿಂದ ಸಂಪೂಜೆಯನ್ನು ಕೊಂಡಿರುವ ಮಂತ್ರವೂ, (ಜನನ ಮರಣಗಳ) ಸಂಸಾರ(ವನ್ನು ದಾಟಿಸುವ) ಉತ್ತಾರಮಂತ್ರವೂ, ಚೆನ್ನಾಗಿ ಕಟ್ಟಿಕೊಂಡಿರುವ ಕತ್ತಲೆಯ ಮೊತ್ತವನ್ನು ಹೋಗಲಾಡಿಸುವ ಮಂತ್ರವೂ, ಸರ್ವೈಶ್ವರ್ಯ (ವನ್ನು ಸಾಧಿಸಿ ಕೊಡುವ) ಏಕ ಮಂತ್ರವೂ, ವ್ಯಸನವೆಂಬ ಹಾವು ಕಚ್ಚಿದವರಿಗೆ ಚೆನ್ನಾಗಿ ತ್ರಾಣಕೊಡುವ ಮಂತ್ರವೂ, ಜನ್ಮವನ್ನು ಸಫಲವನ್ನಾಗಿ ಮಾಡುವ ಮಂತ್ರವೂ ಆದ ಶ್ರೀ ಕೃಷ್ಣಮಂತ್ರವನ್ನು, ಎಲೈ ನಾಲಗೆಯೇ, ಸತತವೂ ಜಪಿಸು, ಜಪಿಸು.

೨೪

ವ್ಯಾಮೋಹಪ್ರಶಮೌಷಧಂ ಮುನಿಮನೋವೃತ್ತಿಪ್ರವೃತ್ತ್ಯೌಷಧಂ
ದೈತ್ಯೇಂದ್ರಾರ್ತಿಕರೌಷಧಂ ತ್ರಿಭುವನೇ ಸಂಜೀವನೈಕೌಷಧಂ
ಭಕ್ತಾತ್ಯಂತಹಿತೌಷಧಂ ಭವಭಯಪ್ರಧ್ವಂಸನೈಕೌಷಧಂ
ಶ್ರೇಯಃಪ್ರಾಪ್ತಿಕರೌಷಧಂ ಪಿಬ ಮನಃ ಶ್ರೀಕೃಷ್ಣದಿವ್ಯೌಷಧಂ

ವ್ಯಾಮೋಹವನ್ನು ಚೆನ್ನಾಗಿ ಶಮನಮಾಡುವ ಔಷಧವೂ, ಮುನಿಗಳ ಮನೋವೃತ್ತಿಯನ್ನು ಪ್ರವೃತ್ತಿಗೊಳಿಸುವ ಔಷಧವೂ, ರಾಕ್ಷಸರಾಜರಿಗೆ ಸಂಕಟಕರವಾದ ಔಷಧವೂ, ಭಕ್ತರಿಗೆ ಅತ್ಯಂತ ಹಿತವಾದ ಔಷಧವೂ, ಭವ (ಹುಟ್ಟು ಸಾವುಗಳ) ಭಯವನ್ನು ಸಂಪೂರ್ಣವಾಗಿ ನಾಶಮಾಡುವ ಏಕ ಔಷಧವೂ, ಶ್ರೇಯಸ್ಸನ್ನು ದೊರಕಿಸಿಕೊಡುವ ಔಷಧವೂ ಆದ ಶ್ರೀಕೃಷ್ಣನೆಂಬ ದಿವ್ಯೌಷಧವನ್ನು, ಎಲೈ ಮನಸ್ಸೇ, ನೀನು ಕುಡಿ.

೨೫

ಆಮ್ನಾಯಾಭ್ಯಸನಾನ್ಯರಣ್ಯರುದಿತಂ ವೇದವ್ರತಾನ್ಯನ್ವಹಂ
ಮೇದಶ್ಛೇದಫಲಾನಿ ಪೂರ್ತವಿಧಯಃ ಸರ್ವೇ ಹುತಂ ಭಸ್ಮನಿ
ತೀರ್ಥಾನಾಮವಗಾಹನಾನಿ ಚ ಗಜಸ್ನಾನಂ ವಿನಾ ಯತ್ಪದ-
ದ್ವಂದ್ವಾಂಭೋರುಹಸಂಸ್ಮೃತಿಂ ವಿಜಯತೇ ದೇವಃ ಸ ನಾರಾಯಣಃ

ಯಾರ ಪಾದಪದ್ಮಗಳೆರಡರ ಸಂಸ್ಮರಣವಿಲ್ಲದಿದ್ದರೆ ವೇದಗಳ ಅಭ್ಯಾಸಗಳು ಅರಣ್ಯರೋದನವಾಗುವುವೋ, ಪ್ರತಿ ದಿನವೂ ನಡಸುವ ವೇದವ್ರತಗಳು ಬೊಜ್ಜನ್ನು ಕತ್ತರಿಸುವುದರಲ್ಲಿ ಮಾತ್ರ ಸಫಲವಾಗುತ್ತವೋ, (ಕೆರೆ, ಬಾವಿ, ಛತ್ರ ಮುಂತಾದವುಗಳನ್ನು ಮಾಡಿಸುವ) ಪೂರ್ತವಿಧಿಗಳು ಎಲ್ಲವೂ ಬೂದಿಯಲ್ಲಿ ಮಾಡಿದ ಹೋಮವಾಗುತ್ತವೋ, ತೀರ್ಥಗಳಲ್ಲಿ ಮುಳುಗಿ ಸ್ನಾನ ಮಾಡುವುದು ಆನೆ ನೀರಿಗೆ ಇಳಿದಂತೆ ಆಗುತ್ತದೋ—ಅಂತಹ ದೇವನಾದ ನಾರಾಯಣನು ವಿಜಯಿಸುತ್ತಾನೆ.

೨೬

ಶ್ರೀಮನ್ನಾಮ ಪ್ರೋಚ್ಯ ನಾರಾಯಣಾಖ್ಯಂ
ಕೇನ ಪ್ರಾಪುರ್ವಾಂಛಿತಂ ಪಾಪಿನೋಽಪಿ
ಹಾ ! ನಃ ಪೂರ್ವಂ ವಾಕ್ ಪ್ರವೃತ್ತಾ ನ ತಸ್ಮಿನ್
ತೇನ ಪ್ರಾಪ್ತಂ ಗರ್ಭವಾಸಾದಿದುಃಖಂ

'ನಾರಾಯಣ' ಎಂಬ ಶ್ರೀಮಂತವಾದ ಹೆಸರನ್ನು ಹೇಳಿ, (ತಾವು) ಪಾಪಿಗಳಾದರೂ ಕೂಡ, ಯಾರು ತಾನೆ ತಾವು ಬಯಸಿದ್ದನ್ನು ಪಡೆಯಲಿಲ್ಲ? ಅಯ್ಯೋ, (ಈ ಜನ್ಮಕ್ಕೆ) ಪೂರ್ವದಲ್ಲಿ ನಮ್ಮ ಮಾತು ಅದರಲ್ಲಿ ಪ್ರವರ್ತಿಸಲಿಲ್ಲ. ಆದ್ದರಿಂದ (ನಮಗೆ ಈಗ) ಗರ್ಭವಾಸವೇ ಮೊದಲಾದ ದುಃಖ ಪ್ರಾಪ್ತವಾಯಿತು.

೨೭

ಮಜ್ಜನ್ಮನಃ ಫಲಮಿದಂ ಮಧುಕೈಟಭಾರೇ
ಮತ್ಪ್ರಾರ್ಥನೀಯ ಮದನುಗ್ರಹ ಏಷ ಏವ
ತ್ವದ್ಭೃತ್ಯ ಭೃತ್ಯ ಪರಿಚಾರಕ ಭೃತ್ಯ ಭೃತ್ಯ
ಭೃತ್ಯಸ್ಯ ಭೃತ್ಯ ಇತಿ ಮಾಂ ಸ್ಮರ ಲೋಕನಾಥ

ಮಧುಕೈಟಭರಿಗೆ ಶತ್ರುವಾದವನೇ, ನನ್ನ ಜನ್ಮಕ್ಕೆ ಇದು ಫಲ; ನಾನು (ನಿನ್ನನ್ನು) ಪ್ರಾರ್ಥಿಸಿಕೊಳ್ಳಬೇಕಾದ್ದೂ (ನೀನು) ನನಗೆ ಅನುಗ್ರಹಿಸಬೇಕಾದ್ದೂ ಇದೇ :—(ಯಾವದು ಎಂದರೆ) ಎಲೈ ಲೋಕನಾಥ, ನಿನ್ನ ಭೃತ್ಯನ ಭೃತ್ಯನ ಪರಿಚಾರಕನ ಭೃತ್ಯನ ಭೃತ್ಯನ ಭೃತ್ಯನ ಭೃತ್ಯನೆಂದು ನನ್ನನ್ನು ಸ್ಮರಿಸು.

೨೮

ನಾಥೇ ನಃ ಪುರುಷೋತ್ತಮೇ ತ್ರಿಜಗತಾಮೇಕಾಧಿಪೇ ಚೇತಸಾ
ಸೇವ್ಯೇ ಸ್ವಸ್ಯ ಪದಸ್ಯ ದಾತರಿ ಸುರೇ ನಾರಾಯಣೇ ತಿಷ್ಠತಿ
ಯಂ ಕಂಚಿತ್ ಪುರುಷಾಧಮಂ ಕತಿಪಯಗ್ರಾಮೇಶಮಲ್ಪಾರ್ಥದಂ
ಸೇವಾಯೈ ಮೃಗಯಾಮಹೇ ನರಮಹೋ ! ಮೂಕಾ ವರಾಕಾ ವಯಂ

ನಮಗೆ ನಾಥನೂ, ಪುರುಷೋತ್ತಮನೂ, ಮೂರು ಲೋಕಕ್ಕೆ ಏಕಾಧಿಪತಿಯೂ, ಮನಃಪೂರ್ವಕವಾಗಿ ಸೇವಿಸಲು ತಕ್ಕವನೂ, ತನ್ನ ಪದವಿಯನ್ನೇ ಕೊಡುವ ದೇವನೂ ಆದ ನಾರಾಯಣನು ಇದ್ದಾನೆ. (ಆದರೂ) ಯಾವನೋ ಪುರುಷಾಧಮನನ್ನು, ಕೆಲವು ಗ್ರಾಮಗಳಿಗೆ ಒಡೆಯನಾಗಿ ಅಲ್ಪಾರ್ಥವನ್ನು ಕೊಡುವ ನರನನ್ನು ಹುಡುಕುತ್ತೇವೆ. ಇದು ಆಶ್ಚರ್ಯ ! ನಾವು ಮೂಢರು, (ನಮಗೆ ಒಳ್ಳೆಯದಾದ್ದನ್ನು ತಿಳಿಯದ) ಕೀಳರು.

೨೯

ಮದನ ಪರಿಹರ ಸ್ಥಿತಿಂ ಮದೀಯೇ
ಮನಸಿ ಮುಕುಂದಪದಾರವಿಂದಧಾಮ್ನಿ
ಹರನಯನಕೃಶಾನುನಾ ಕೃಶೋऽಸಿ
ಸ್ಮರಸಿ ನ ಚಕ್ರಪರಾಕ್ರಮಂ ಮುರಾರೇಃ

ಮದನನೆ, ಮುಕುಂದನ ಪಾದಕಮಲಗಳಿಗೆ ಮನೆಯಾಗಿರುವ ನನ್ನ ಮನಸ್ಸಿನಲ್ಲಿ ನೀನು ನೆಲಸಿರುವುದನ್ನು ಬಿಟ್ಟುಬಿಡು. ಹರನ ಕಣ್ಣಿನ ಬೆಂಕಿಯಿಂದ (ಮೊದಲೇ) ಕೃಶನಾಗಿದ್ದೀಯೆ. ಮುರಾರಿಯ ಚಕ್ರದ ಪರಾಕ್ರಮವನ್ನು ನೀನು ಸ್ಮರಿಸುವುದಿಲ್ಲವೆ ?

೩೦

ತತ್ತ್ವಂ ಬ್ರುವಾಣಾನಿ ಪರಂ ಪರಸ್ಮಾತ್
ಮಧುಕ್ಷರಂತೀವ ಸತಾಂ ಫಲಾನಿ
ಪ್ರಾವರ್ತಯ ಪ್ರಾಂಜಲಿರಸ್ಮಿ ಜಿಹ್ವೇ
ನಾಮಾನಿ ನಾರಾಯಣಗೋಚರಾಣಿ

ಉತ್ತಮವಾದುದಕ್ಕಿಂತ ಉತ್ತಮವಾದ ತತ್ತ್ವವನ್ನು ಹೇಳುವುದಾಗಿಯೂ, ಮಧುವನ್ನು ಸುರಿಸುವಂಥದಾಗಿಯೂ, ಸತ್ಪುರುಷರಿಗೆ ಫಲ ಕೊಡುವುದಾಗಿಯೂ ಇರುವ ನಾರಾಯಣ (ಪರವಾಗಿ) ತೋರಿಬರುವ ನಾಮಗಳನ್ನು, ಎಲೈ ನಾಲಗೆಯೇ, ಕೈಮುಗಿದುಕೊಂಡು (ಬೇಡಿಕೊಳ್ಳುತ್ತ) ಇದ್ದೇನೆ, ಮತ್ತೆ ಮತ್ತೆ (ನಾಲಗೆಯಲ್ಲಿ) ತಿರುವಿಹಾಕು.

೩೧

ಇದಂ ಶರೀರಂ ಪರಿಣಾಮಪೇಶಲಂ
ಪತತ್ಯವಶ್ಯಂ ಶ್ಲಥಸಂಧಿಜರ್ಝರಂ
ಕಿಮೌಷಧೈಃ ಕ್ಲಿಶ್ಯಸಿ ಮೂಢ ದುರ್ಮತೇ
ನಿರಾಮಯಂ ಕೃಷ್ಣರಸಾಯನಂ ಪಿಬ

ಈ ಶರೀರವು ಬರುಬರುತ್ತ ನಿಸ್ಸಾರವಾಗುತ್ತದೆ, ಕೀಲುಗಳು ಸಡಿಲಿ ಜರ್ಝರವಾಗಿ ಅವಶ್ಯವಾಗಿ ಬಿದ್ದುಹೋಗುತ್ತವೆ. ಎಲೈ ಮೂಢನೇ, ದುರ್ಮತಿಯೇ, ಏಕೆ (ವೃಥಾ) ಔಷಧಗಳಿಂದ ಕ್ಲೇಶಪಡುವೆ ? ರೋಗಗಳೇ ಇಲ್ಲದಂತೆ ಮಾಡುವ ಕೃಷ್ಣರಸಾಯನವನ್ನು ಕುಡಿ.

೩೨

ದಾರಾ ವಾರಾಕರವರಸುತಾ ತೇ ತನೂಜೋ ವಿರಿಂಚಿಃ
ಸ್ತೋತಾ ವೇದಸ್ತವ ಸುರಗಣೋ ಭೃತ್ಯವರ್ಗಃ ಪ್ರಸಾದಃ
ಮುಕ್ತಿರ್ಮಾಯಾ ಜಗದವಿಕಲಂ ತಾವಕೀ ದೇವಕೀ ತೇ
ಮಾತಾ ಮಿತ್ರಂ ಬಲರಿಪುಸುತಸ್ತ್ವಯ್ಯತೋಽನ್ಯಂ ನ ಜಾನೇ

ನಿನ್ನ ಹೆಂಡತಿಯು ಸಮುದ್ರನ ಶ್ರೇಷ್ಠ ಪುತ್ರಿ ; ನಿನ್ನ ಮಗ ಬ್ರಹ್ಮ ; ನಿನ್ನನ್ನು ಸ್ತೋತ್ರಮಾಡುವುದು ವೇದ ; ದೇವತೆಗಳ ಗಣವೆ ನಿನ್ನ ಭೃತ್ಯವರ್ಗ ; ಮುಕ್ತಿ ನಿನ್ನ ಪ್ರಸಾದ ; ಅವಿಕಲ (ಸಂಪೂರ್ಣ)ವಾದ ಜಗತ್ತು ನಿನ್ನ ಸಂಬಂಧವಾದ ಮಾಯೆ ; ದೇವಕಿ ನಿನ್ನ ತಾಯಿ ; ಬಲರಿಪುವಾದ ಇಂದ್ರನಿಗೆ ಮಗನಾದ ಅರ್ಜುನನು ನಿನ್ನ ಮಿತ್ರ ; (ಇಂತಹ) ನಿನ್ನನ್ನು ಹೊರತು ಬೇರೊಬ್ಬರನ್ನು ನಾನು ಅರಿಯೆ.

೩೩

ಕೃಷ್ಣೋ ರಕ್ಷತು ನೋ ಜಗತ್ರಯಗುರುಃ ಕೃಷ್ಣಂ ನಮಸ್ಯಾಮ್ಯಹಂ
ಕೃಷ್ಣೇನಾಮರಶತ್ರವೋ ವಿನಿಹತಾಃ ಕೃಷ್ಣಾಯ ತಸ್ಮೈ ನಮಃ
ಕೃಷ್ಣಾದೇವ ಸಮುತ್ಥಿತಂ ಜಗದಿದಂ ಕೃಷ್ಣಸ್ಯ ದಾಸೋಽಸ್ಮ್ಯಹಂ
ಕೃಷ್ಣೇ ತಿಷ್ಠತಿ ಸರ್ವಮೇತದಖಿಲಂ ಹೇ ಕೃಷ್ಣ ರಕ್ಷಸ್ವ ಮಾಂ

ಮೂರು ಲೋಕಗಳಿಗೂ ಗುರುವಾದ ಕೃಷ್ಣನು ನಮ್ಮನ್ನು ರಕ್ಷಿಸಲಿ. ನಾನು ಕೃಷ್ಣನನ್ನು ನಮಸ್ಕರಿಸುತ್ತೇನೆ. ಕೃಷ್ಣನಿಂದ ದೇವತೆಗಳ ಶತ್ರುಗಳಾದ ರಾಕ್ಷಸರು ಹತರಾದರು ; ಅಂತಹ ಕೃಷ್ಣನಿಗೆ ನಮಸ್ಕಾರ. ಈ ಜಗತ್ತು ಕೃಷ್ಣನ ದೆಸೆಯಿಂದಲೆ ಉದಯಿಸಿತು. ನಾನು ಕೃಷ್ಣನ ದಾಸನಾಗಿದ್ದೇನೆ. ಈ ಸರ್ವವೂ ಅಖಿಲವೂ ಕೃಷ್ಣನಲ್ಲಿ ನೆಲಸಿ ನಿಂತಿದೆ. ಎಲೈ ಕೃಷ್ಣನೇ, ನನ್ನನ್ನು ರಕ್ಷಿಸು.

೩೪

ತತ್ ತ್ವಂ ಪ್ರಸೀದ ಭಗವನ್ ಕುರು ಮಯ್ಯನಾಥೇ
ವಿಷ್ಣೋ ಕೃಪಾಂ ಪರಮಕಾರುಣಿಕಃ ಕಿಲ ತ್ವಂ
ಸಂಸಾರಸಾಗರನಿಮಗ್ನಮನಂತದೀನ-
ಮುದ್ಧರ್ತುಮರ್ಹಸಿ ಹರೇ ಪುರುಷೋತ್ತಮೋಽಸಿ

ಭಗವಂತನೇ, ಆದ್ದರಿಂದ ನೀನು ನನ್ನಲ್ಲಿ ಪ್ರಸನ್ನನಾಗು. ವಿಷ್ಣುವೆ, ಅನಾಥನಾದ ನನ್ನಲ್ಲಿ ಕೃಪೆ ಮಾಡು. ನೀನು ಪರಮ ಕಾರುಣಿಕನಲ್ಲವೆ ! ಅನಂತನೆ, ಸಂಸಾರ ಸಾಗರದಲ್ಲಿ ಮುಳುಗಿ, ದೀನನಾಗಿರುವ ನನ್ನನ್ನು ಉದ್ಧರಿಸಲು ನೀನು ಅರ್ಹನಾಗಿದ್ದೀಯೆ. ಹರಿಯೆ, ನೀನು ಪುರುಷೋತ್ತಮನಾಗಿದ್ದೀಯೆ.

೩೫

ನಮಾಮಿ ನಾರಾಯಣಪಾದಪಂಕಜಂ
ಕರೋಮಿ ನಾರಾಯಣಪೂಜನಂ ಸದಾ
ವದಾಮಿ ನಾರಾಯಣನಾಮನಿರ್ಮಲಂ
ಸ್ಮರಾಮಿ ನಾರಾಯಣತತ್ತ್ವಮವ್ಯಯಂ

ನಾನು ನಾರಾಯಣನ ಪಾದಪಂಕಜವನ್ನು ನಮಸ್ಕರಿಸುತ್ತೇನೆ; ನಾರಾಯಣನ ಪೂಜೆಯನ್ನು ಮಾಡುತ್ತೇನೆ; ನಿರ್ಮಲವಾದ ನಾರಾಯಣ ನಾಮವನ್ನು ಹೇಳುತ್ತೇನೆ; ಅವ್ಯಯವಾದ (ನಾಶವಿಲ್ಲದ) ನಾರಾಯಣ ತತ್ತ್ವವನ್ನು ಸ್ಮರಿಸುತ್ತೇನೆ.

೩೬

ಶ್ರೀನಾಥ ನಾರಾಯಣ ವಾಸುದೇವ
ಶ್ರೀ ಕೃಷ್ಣ ಭಕ್ತಪ್ರಿಯ ಚಕ್ರಪಾಣೇ
ಶ್ರೀ ಪದ್ಮನಾಭಾಚ್ಯುತ ಕೈಟಭಾರೇ
ಶ್ರೀ ರಾಮ ಪದ್ಮಾಕ್ಷ ಹರೇ ಮುರಾರೇ

ಶ್ರೀನಾಥ, ನಾರಾಯಣ, ವಾಸುದೇವ, ಶ್ರೀ ಕೃಷ್ಣ, ಭಕ್ತಪ್ರಿಯ, ಚಕ್ರಪಾಣಿ, ಶ್ರೀ ಪದ್ಮನಾಭ, ಅಚ್ಯುತ, ಕೈಟಭಾರಿ, ಶ್ರೀ ರಾಮ, ಪದ್ಮಾಕ್ಷ, ಹರಿ, ಮುರಾರಿ (ಎಂಬುದಾಗಿ)—

೩೭

ಅನಂತ ವೈಕುಂಠ ಮುಕುಂದ ಕೃಷ್ಣ
ಗೋವಿಂದ ದಾಮೋದರ ಮಾಧವೇತಿ
ವಕ್ತುಂ ಸಮರ್ಥೋಽಪಿ ನ ವಕ್ತಿ ಕಶ್ಚಿತ್
ಅಹೋ! ಜನಾನಾಂ ವ್ಯಸನಾಭಿಮುಖ್ಯಂ

ಅನಂತ, ವೈಕುಂಠ, ಮುಕುಂದ, ಕೃಷ್ಣ, ಗೋವಿಂದ, ದಾಮೋದರ, ಮಾಧವ ಎಂಬುದಾಗಿ ಹೇಳಲು ಸಮರ್ಥರಾಗಿದ್ದರೂ ಯಾರೂ ಹೇಳುವುದಿಲ್ಲವಲ್ಲ! ಇದಲ್ಲವೆ ಆಶ್ಚರ್ಯ! ಜನಗಳ ಮುಖ ವ್ಯಸನಗಳ ಕಡೆಗೇ ತಿರುಗಿದೆ!

೩೮

ಧ್ಯಾಯಂತಿ ಯೇ ವಿಷ್ಣುಮನಂತಮವ್ಯಯಂ
ಹೃತ್ಪದ್ಮಮಧ್ಯೇ ಸತತಂ ವ್ಯವಸ್ಥಿತಂ
ಸಮಾಹಿತಾನಾಂ ಸತತಾಭಯಪ್ರದಂ
ತೇ ಯಾಂತಿ ಸಿದ್ಧಿಂ ಪರಮಾಂ ಚ ವೈಷ್ಣವೀಂ

ಅನಂತನೂ, ಅವ್ಯಯನೂ, ಹೃದಯಪದ್ಮದ ಮಧ್ಯದಲ್ಲಿ ಸಂತತವಾಗಿ ನೆಲಸಿನಿಂತವನೂ, ಸ್ಥಿರವಾದ ಚಿತ್ತವುಳ್ಳವರಿಗೆ ಅಭಯವನ್ನು ಕೊಡುವವನೂ ಆದ ವಿಷ್ಣುವನ್ನು ಯಾರು ಧ್ಯಾನ ಮಾಡುತ್ತಾರೋ ಅವರು ಅತ್ಯುತ್ತಮವಾದ ವೈಷ್ಣವ ಸಿದ್ಧಿಯನ್ನು ಪಡೆಯುತ್ತಾರೆ.

೩೯

ಕ್ಷೀರಸಾಗರತರಂಗಶೀಕರಾ-
ಸಾರತಾರಕಿತಚಾರುಮೂರ್ತಯೇ
ಭೋಗಿಭೋಗಶಯನೀಯಶಾಯಿನೇ
ಮಾಧವಾಯ ಮಧುವಿದ್ವಿಷೇ ನಮಃ

ಕ್ಷೀರಸಾಗರದ ಅಲೆಗಳ ತುಂತುರುಗಳ ಧಾರೆಯಿಂದ ನಕ್ಷತ್ರಖಚಿತವಾದಂತೆ ಮನೋಹರನಾಗಿರುವ ಮೂರ್ತಿಗೆ, ಹಾವಿನ ಹೆಡೆಯೆಂಬ ಹಾಸಿಗೆಯ ಮೇಲೆ ಮಲಗಿದವನಿಗೆ, ಮಾಧವನಿಗೆ, ಮಧುವೈರಿಗೆ ನಮಸ್ಕಾರ.

೪೦

ಯಸ್ಯ ಪ್ರಿಯೌ ಶ್ರುತಿಧರೌ ಕವಿಲೋಕವೀರೌ
ಮಿತ್ರೇ ದ್ವಿಜನ್ಮವರಪದ್ಮಶರಾವಭೂತಾಂ
ತೇನಾಂಬುಜಾಕ್ಷಚರಣಾಂಬುಜಷಟ್ಪದೇನ
ರಾಜ್ಞಾ ಕೃತಾ ಕೃತಿರಿಯಂ ಕುಲಶೇಖರೇಣ

ಶ್ರುತಿಧರರೂ (ವೇದಗಳನ್ನು ಬಲ್ಲವರೂ) ಕವಿಲೋಕವೀರರೂ ದ್ವಿಜಶ್ರೇಷ್ಠರೂ ಆದ 'ಪದ್ಮ' ಮತ್ತು 'ಶರ' ಎಂಬವರಿಬ್ಬರು ಯಾರಿಗೆ ಪ್ರಿಯರೂ ಮಿತ್ರರೂ ಆಗಿದ್ದರೋ—ಆ 'ಅಂಬುಜಾಕ್ಷ ಚರಣಾಂಬುಜ ಷಟ್ಪದ'ನಾದ (ಕಮಲದಂತೆ ಕಣ್ಣುಗಳುಳ್ಳ ನಾರಾಯಣನ ಪಾದಪದ್ಮಗಳಲ್ಲಿ ದುಂಬಿಯಂತಿರುವ) ಕುಲಶೇಖರ ರಾಜನಿಂದ ಈ ಕೃತಿಯು ಮಾಡಲ್ಪಟ್ಟಿತು.

**ಮುಕುಂದಮಾಲೆಯು ಅದರ ಕನ್ನಡ ಅನುವಾದದೊಡನೆ ಮುಗಿಯಿತು.**

# ಜಿತಂ ತೇ ಸ್ತೋತ್ರ

೧

ಜಿತಂ ತೇ ಪುಂಡರೀಕಾಕ್ಷ ಜಿತಂ ತೇ ಭಕ್ತವತ್ಸಲ
ಜಿತಂ ತೇ ಕಮಲಾಕಾಂತ ಜಿತಂ ತೇ ಪುರುಷೋತ್ತಮ

ಜಯ ನಿನಗೆ ಪುಂಡರೀಕಾಕ್ಷ ! ಜಯ ನಿನಗೆ ಭಕ್ತವತ್ಸಲ ! ಜಯ ನಿನಗೆ ಕಮಲಾಕಾಂತ ! ಜಯ ನಿನಗೆ ಪುರುಷೋತ್ತಮ !

೨

ತ್ವಮೇವ ವೇತ್ಸಿ ಶ್ರೇಯೋ ಮೇ ನೇದಮೇತದಿತೀತಿ ಚ
ಬುದ್ಧಿಯೋಗಂ ಚ ಮೇ ದೇಹಿ ಯೇನ ತ್ವಾಮುಪಯಾಮ್ಯಹಂ

ನನಗೆ ಇದು ಶ್ರೇಯಸ್ಸು, ಇದು ಅಲ್ಲ—ಎಂಬುದನ್ನು ನೀನೇ (ನೀನು ಮಾತ್ರ) ಬಲ್ಲೆ. ಯಾವುದರಿಂದ ನಿನ್ನ ಬಳಿ ಸಾರಬಹುದೋ ಅಂತಹ ಬುದ್ಧಿ ಯೋಗವನ್ನು ನನಗೆ ಕೊಡು.

೩

ಉಪಚಾರಾಪದೇಶೇನ ಕೃತಾನ್ ಅಹರಹರ್ಮಯಾ
ಅಪಚಾರಾನಿಮಾನ್ ಸರ್ವಾನ್ ಕ್ಷಮಸ್ವ ಪುರುಷೋತ್ತಮ

ಉಪಚಾರಗಳೆಂದು ನಂಬಿಕೊಂಡು ದಿನದಿನವೂ ನಾನು ಮಾಡುತ್ತಿರುವ ಅಪಚಾರಗಳು ಇವೆಲ್ಲವನ್ನೂ ಕ್ಷಮಿಸಿಬಿಡು, ಪುರುಷೋತ್ತಮನೆ.

೪

ಶರಣಂ ತ್ವಾಂ ಪ್ರಪನ್ನೋಽಸ್ಮಿ ಶರಣಾಗತವತ್ಸಲ
ಕಟಾಕ್ಷೈಃ ಕರುಣಾಪೂರ್ಣೈಃ ಸಮಾಲೋಕಯ ಮಾಂ ವಿಭೋ

ಶರಣಾಗತವತ್ಸಲನೆ, ನಾನು ನಿನಗೆ ಶರಣಾಗಿ, ನಿನ್ನಲ್ಲಿ ಪ್ರಪತ್ತಿಯುಳ್ಳವ ನಾಗಿದ್ದೇನೆ. ಪ್ರಭುವೆ, ಕರುಣೆಯಿಂದ ಪೂರ್ಣವಾದ ಕಟಾಕ್ಷಗಳಿಂದ ನನ್ನನ್ನು ಚೆನ್ನಾಗಿ ನೋಡು.

**ಶುಭಂ ಭೂಯಾತ್**

## ಈ ಮಾಲೆಯ ಪುಸ್ತಕಗಳು

| | | |
|---|---|---|
| ಶ್ರೀ ಚಿಕದೇವರಾಜ ಬಿನ್ನಪ | | (ಮುಗಿದಿದೆ) |
| ೧. ಮುಕುಂದಮಾಲಾ | .... | ೦–೫೦ |
| ೨. ಶ್ರೀ ರಾಮನಾಮ | .... | ೦–೩೭ |
| ೩. ಕಸ್ತೂರೀತಿಲಕಂ | .... | ೦–೩೭ |
| ೪. ಜಯಮಂಗಳಂ | .... | ೦–೩೭ |
| ೫. ಪ್ರಾಣೇಶ್ವರಪ್ರಾಪ್ತಿ | .... | ೦–೫೦ |
| ೬. ಶ್ರೀ ವಿಷ್ಣು ಚಿತ್ತ | .... | ೦–೫೦ |
| ೭. ತಿರುಪ್ಪಾವೈ | | (ಮುಗಿದಿದೆ) |
| ೮. ಶ್ರೀ ಕೃಷ್ಣ ಸೇವಾವ್ರತಂ | .... | ೦–೭೫ |
| ೯. ಮಾಧವಪದಮಾಧುರ್ಯ | .... | ೧–೦೦ |
| ೧೦. ಶ್ರೀ ಸಾಯಿಚಿಂತನ | .... | ೧–೨೫ |

### ಭಗವದ್ವಿಷಯಕವಾದ ಪುಸ್ತಕಗಳು

### ಸಂಸ್ಕೃತ, ತಮಿಳು ಮೂಲ ; ಕನ್ನಡ ಅನುವಾದ


ಪ್ರತಿಗಳು ದೊರೆಯುವ ಸ್ಥಳ :

ಹೆಬ್ಬಾರ್ ಶ್ರೀವೈಷ್ಣವ ಸಭಾ

'ಶಾಂತಿಭವನ,' ಶೇಷಾದ್ರಿ ರೋಡ್, ಬೆಂಗಳೂರು–9.